# ಶ್ರೀ ಗೋಪ್ಯ ಚಿಂತಾಮಣಿ









"ವೀರಶೈವ ಧರ್ಮಮಾರ್ಗ ಪ್ರವರ್ತಕ" ಶ್ರೀ ಶಿವಯೋಗಿ ಶಿವಾಚಾರ್ಯರು. (ಶ್ರೀ.ಶಿ.ಲ)

.ಡಾ. ಜ. ಚ. ನಿ ಸನ್ನಿಧಿಯು

K. B. Goudar

# ಶ್ರೀ ಗೋಪ್ಯ ಚಿಂತಾಮಣಿ

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಡಾ|| ಶ್ರೀ ಜ. ಚ. ನಿ.

ಶ್ರೀಶೈಲ ಜಗದ್ಗುರು ನಿಡುವಮಾನಿಂದಿ ನಿವಾಸ,
ಶ್ರೀ ಜ. ಚ. ನಿ. ಅಧ್ಯಯನಪೀಠ, ಮತ್ತು ಸಂಶೋಧನ ಸಂಸ್ಥೆ;
ಶಿವಾಚಾರ್ಯ ತತ್ತ್ವ ತುಂಗೋತ್ರಿ; ಚೈತನ್ಯಪಥ!
ನಂ–೪೯, ಹ, ಬ. ಸಮಾಜಬೀದಿ, ಬಸವನ ಗುಡಿ
ಬೆಂಗಳೂರು–೪.

ಪ್ರಕಾಶಕರು :
ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರು
ಡಾ। ಶ್ರೀ ಜ. ಚ. ನಿ. ಸನ್ನಿಧಿಯವರು,
ಶ್ರೀಶೈಲ ಜಗದ್ಗುರು ನಿಡುಮಾಮಿಡಿ ನಿಜಾನುಭಾವ ನಿವ.ಸ,
ಬಸವನ ಗುಡಿ, ಬೆಂಗಳೂರು-೪

ಸೇವಾಕರ್ತರು :
ಶ್ರೀ ಸಿದ್ಧೇಶ್ವರ ಸಂಸ್ಥೆ, ವಿಜಾಪುರ



ಮೊದಲಚ್ಚು :
೧೯೮೮, ಒಂದು ಸಾವಿರ ಹೊತ್ತಗೆಗಳು

ಬೆಲೆ : ಹನ್ನೆರಡು ರೂಪಾಯಿಗಳು



ಅಚ್ಚುಕೊಟದವರು :
ನಂದನ ಪ್ರಿಂಟಿಂಗ ಪ್ರೆಸ್
ಆಜಾದ ರೋಡ, ವಿಜಾಪುರ

ಮುಖಪುಟದ ಕಲಾಕಾರರು :
ಮಂಜುನಾಥ ಮಾನೆ
ವಿಜಾಪೂರ

# ಸಮರ್ಪಣ



೧೯೮೮–೯–೧೪ ಮತ್ತು ೧೫ ದಿನಾಂಕಗಳಲ್ಲಿ ವಿಜಾಪುರ
ಶ್ರೀ ಸಿದ್ಧೇಶ್ವರ ಸಂಸ್ಥೆಯ ವತಿಯಿಂದ ನಡೆದ
೮ ನೆಯ ಶತಮಾನದಲ್ಲಿ ಸಾಲೋಟಗಿ ವಿಶ್ವವಿದ್ಯಾಲಯದಲ್ಲಿ
ಪ್ರಾಚಾರ್ಯರಾಗಿದ್ದ, ವೀರಶೈವ ಏಕೈಕ ಧರ್ಮಗ್ರಂಥಕರ್ತೃವಾದ,
'ಮಹಾವೀರಶೈವ ಧರ್ಮಮಾರ್ಗ ಪ್ರವರ್ತಕ'ರಾದ,
ಚಿದಾನಂದ ಪರಾಕಾಶ ಶಿವಾನುಭವಯೋಗಿಯಾದ,
ಶ್ರೀ ಶಿವಯೋಗಿ ಶಿವಾಚಾರ್ಯರ
ದ್ವಾದಶ ಶತಮಾನೋತ್ಸವದ ಸವಿನೆನಹಿಗಾಗಿ
**ಶ್ರೀ ಸಿದ್ಧೇಶ್ವರರ ಶ್ರೀ ಚರಣದಲ್ಲಿ**

—ಸೇವಾ ಸಮಿತಿಯವರು
ವಿಜಾಪುರ

# ಶ್ರೀ ಸಿದ್ಧೇಶ್ವರ ಸಂಸ್ಥೆ, ವಿಜಾಪುರ

## ಆಡಳಿತ ಮಂಡಳಿ

| | | | |
|---|---|---|---|
| ೧ | ಶ್ರೀ | ಎಸ್. ಡಿ. ಅಕ್ಕಿ ಅಡ್ವೋಕೇಟ | ಪ್ರೆಸಿಡೆಂಟ |
| ೨ | " | ಆರ್. ಬಿ. ಗುದ್ದಿ ಅಡ್ವೋಕೇಟ | ವ್ಹಾಯಿಸ್ ಪ್ರೆಸಿಡೆಂಟ |
| ೩ | " | ವ್ಹಿ. ವ್ಹಿ. ನಿಂಬಾಳ | ಚೇರಮನ್ |
| ೪ | " | ಜಿ. ಎಸ್. ಅವರಂಗಬಾದ | ಸೆಕ್ರೆಟರಿ |
| ೫ | " | ಎಸ್. ಟಿ. ಹತ್ತಿಕಾಳ | ಜಾಯಿಂಟ್ ಸೆಕ್ರೆಟರಿ |
| ೬ | " | ಜಿ. ಬಿ. ಉಕುಮನಾಳ | ಕೋಶಾಧ್ಯಕ್ಷ |
| ೭ | " | ಎಸ್. ಸಿ. ಉಪ್ಪಿನ | ಸದಸ್ಯರು |
| ೮ | " | ಆರ್. ಎಂ. ವಾರದ | " |
| ೯ | " | ಡಿ. ಎಸ್. ಗುಡ್ಡೋಡಗಿ | " |
| ೧೦ | " | ಎಸ್. ಆರ್. ಶೆಟಗಾರ | " |
| ೧೧ | " | ಸಿ. ಎಸ್. ಇಂಡಿ | " |
| ೧೨ | " | ಬಿ. ಆರ್. ಪಾಟೀಲ | " |
| ೧೩ | " | ಸಿ. ಬಿ. ಪಟ್ಟಣಶೆಟ್ಟಿ | " |

# ಸಲ್ಲಿರಕೆ ನೆನಕೆ !

ಸಿದ್ಧಾಂತ ಶಿಖಾಮಣಿ–ವೇದಾಗಮ ವೀರಶೈವಸರಣಿ, ಷಟ್‌ಸ್ಥಲೋದ್ಯನ್ಮಣಿ, ಜೀವೇಶ್ವರಯೋಗ ಪದ್ಮತರಣಿ; ಇವೆಲ್ಲಕ್ಕೂ ಮಿಗಿಲಾಗಿ ಶ್ರೀ ಗೋಪ್ಯ ಚಿಂತಾಮಣಿ ! ಇವು ಶಿವಯೋಗಿ ಶಿವಾಚಾರ್ಯರ ಶ್ರೀ ವಾಣಿಸುಧಾ ಧಾರೆಗಳು. ಒಂದೊಂದು ಮಹತ್ತಮ ಮೌಲ್ಯವುಳ್ಳವುಗಳಾಗಿವೆ. ಪ್ರಾಸಬದ್ಧವಾಗಿರುವಂತೆ ಪರಮ ಪ್ರತಿಭಾ ಪ್ರಬುದ್ಧಗಳೂ ಆಗಿವೆ; ಯಥಾರ್ಥಾನುಭವಸಿದ್ಧಗಳೂ ಆಗಿವೆ. ಪರಮಾರ್ಥ ಪ್ರಬೋಧಕಗಳಾಗಿವೆ.

ಇವುಗಳಲ್ಲಿ 'ಶ್ರೀಗೋಪ್ಯ ಚಿಂತಾಮಣಿ' ಎಂಬ ಶ್ರೀ ವಾಣಿ ಘನ ಗಂಭೀರವಾಣಿ ! ಸಕಲಾರ್ಥ ಪ್ರಕಾಶಕ ಪ್ರದಾಯಕ ಗಹನವಾಣಿ !! ಪರಿಭಾಷಾ ಪ್ರಯೋಗಗಳಿಗೆ ಪರಿಮಿತಿಯಿಲ್ಲ. ಪರಿಭಾವಿಸಿದಷ್ಟೂ ಪರಿಭಾವನೆಗಳು ಮೊಗೆ ಮೊಗೆದು ಬರುತ್ತವೆ.ದಿಟಕ್ಕೂ ಸಿದ್ಧಾಂತ ಶಿಖಾಮಣಿ ಸೈದ್ಧಾಂತಿಕ ಭಾವಪೂರ್ಣ ಧ್ವನಿಪೂರ್ಣ ಮಹಾ ಮೇರುಕೃತಿ ! ಇದನ್ನು ಸೃಜಿಸಿದ ಆ ನೆಯ ಶತಮಾನದ ಶಿವಯೋಗಿ ಶಿವಾಚಾರ್ಯನು ಶಿವಕವಿ; ಶಿವಾನುಭಾವಿ; ಕ್ರಾಂತ ದರ್ಶಿ; ಪರಾಮರ್ಶಿ ! ಭೌದ್ಧಾದಿ ಪ್ರತಿಸಿದ್ಧಾಂತಗಳನ್ನು ಅಪ್ರತಿಮವಾಗಿ ಪ್ರತಿಭಟಿಸಿದ ಪ್ರತಿಭಾವಂತ ! ಮಹಾವೀರಶೈವ ಧರ್ಮಮಾರ್ಗ ಪ್ರವರ್ತಕ !

ಇಂತಹ ಮಹಾವಿಭೂತಿ ಪುರುಷನ ದ್ವಾದಶ ಶತಮಾನೋತ್ಸವವನ್ನು ನಮ್ಮ ಅಪ್ಪಣೆಯಂತೆ ವಿಜಾಪುರ ನಗರದ ಶ್ರೀ ಸಿದ್ಧೇಶ್ವರ ಸಂಸ್ಥೆಯವರು ವೈಶಿಷ್ಟ್ಯಪೂರ್ಣವಾಗಿ ನೆರವೇರಿಸಿ, ಇದರ ಸವಿನೆನಹಿಗಾಗಿ ಯುಗ ಪುರುಷನಾದ ಶಿವಯೋಗಿ ಶಿವಾಚಾರ್ಯರ ವೀರಶೈವ ಸರಣಿಯೆಂದು ಹೆಸರಾದ 'ಸಿದ್ಧಾಂತ ಶಿಖಾಮಣಿ'ಯ ಬಗೆಗೆ ಆತನೇ ಹೇಳಿದ 'ಶ್ರೀಗೋಪ್ಯ ಚಿಂತಾಮಣಿ' ಎಂಬ ಅರ್ಥಪೂರ್ಣವಾದ ವಿಶೇಷಣವನ್ನು ಕಿಂಚಿತ್ ಚಿಂತನ ಮಾಡಿ ಅಷ್ಟಿಷ್ಟು ಪರಿಚಯಿಸಿಲು ಬರೆದ ಈ ಕೃತಿ ಸೇವೆಯನ್ನು ಮಾಡಿ ಅಂದರೆ ಅಚ್ಚಿಸಿ ಈ ಸುಸಮಯದಲ್ಲಿ ಬೆಳಕಿಗೆ ಬರುವಂತೆ ಮಾಡಿದುದನ್ನು ಮರೆಯುವಂತಿಲ್ಲ.

ಈ ದಿಸೆಯಲ್ಲಿ ಶ್ರೀ ಸಿದ್ಧೇಶ್ವರ ಸಂಸ್ಥೆ ಒಂದು ಓಡಾಡುವ ಒಡನಾಡುವ ಗುಡಿಯನ್ನು ರೂಪಿಸಿ ನಾಡವರ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕೀರ್ತಿ ಚಿರಂತನವಾಗಿ ಉಳಿಯುವಲ್ಲಿ ಯಾವ ಅಭ್ಯಂತರವಿಲ್ಲ. ಈ ಸಂಸ್ಥೆಯ ಜೀವನ ದಲ್ಲಿ ಇದೊಂದು ಅಪೂರ್ವ ಸೇವೆ; ಆದರ್ಶ ಸೇವೆ. ಇದಕ್ಕಾಗಿ ಈ ಶ್ರೀ ಸಿದ್ಧೇಶ್ವರ ಸಂಸ್ಥೆಯವರನ್ನು ಹೃದಯಾರೆ ಹರಸೋಣವಾಗಿದೆ

೯–೯–೮೮
ವಿಜಾಪೂರ ಮುಕ್ಕಾಂ

—ಕೃತಿಕರ್ತರು



# ಸೇವಾಕರ್ತರ ನುಡಿ

ಸಮಾಜದ ಸರ್ವತೋಮುಖ ಏಳಿಗೆಯ ಏಕೈಕ ಉದ್ದೇಶದಿಂದ ವಿಜಾಪುರ ನಗರದ ಅಧಿದೈವ ಶ್ರೀ ಸಿದ್ಧೇಶ್ವರ ಅಭಿದಾನದಲ್ಲಿ ಕ್ರಿ. ಶ. ೧೮೮೮ ರಲ್ಲಿ ಪಂಚಮಂಡಳಿಯವರಿಂದ ಸ್ಥಾಪಿತವಾದ ಶ್ರೀ ಸಿದ್ಧೇಶ್ವರ ಸಂಸ್ಥೆಗೆ ಇನ್ನು ಹತ್ತು ವರ್ಷಗಳಲ್ಲಿ ಒಂದು ಶತಮಾನವಾಗುತ್ತದೆ.

ಕಲ್ಯಾಣಕಾರ್ಯದ ತನ್ನ ಘನೋದ್ದೇಶಕ್ಕನುಸರಿಸಿ ಸಂಸ್ಥೆಯು ಸಮಾಜದ ಶೈಕ್ಷಣಿಕ, ಧಾರ್ಮಿಕ, ಆರ್ಥಿಕ ಪ್ರಗತಿಗಾಗಿ ಅನೇಕ ಮಹತ್ಕಾರ್ಯಗಳನ್ನು ಕೈಕೊಂಡಿತು. ಭವ್ಯ ಹಾಗೂ ಸುಂದರವಾದ ಶ್ರೀ ಸಿದ್ಧೇಶ್ವರ ದೇವಾಲಯ, ಶಿವಾನಂಭವ ಮಂಟಪ, ಸಭಾಮಂದಿರ (ಶೆಫರ್ಡಹಾಲ್), ಕಲ್ಯಾಣ ಮಂಟಪ, ವಿದ್ಯಾರ್ಥಿಗಳ ಉಚಿತ ಊಟ ವಸತಿ ಗೃಹ, ಅಂಗಡಿ ಮಳಿಗೆಗಳು ಇವುಗಳಿಗೆಲ್ಲ ಶ್ರೀ ಸಿದ್ಧೇಶ್ವರ ಸಂಸ್ಥೆಯೇ ತಾಯಿಯಾದರೆ, ಶ್ರೀ ಸಿದ್ಧೇಶ್ವರ ಹಾಯ್‌ಸ್ಕೂಲನ್ನೊಳಗೊಂಡ ಶೈಕ್ಷಣಿಕ ಸಂಸ್ಥೆಗಳು ಮತ್ತು, ಶ್ರೀ ಸಿದ್ಧೇಶ್ವರ ಬ್ಯಾಂಕು ಸ್ಥಾಪನೆಯಾಗುವದಕ್ಕೆ ಪ್ರೇರಕ–ಶಕ್ತಿಯಾಗಿದೆ. ಪ್ರತಿ ವರ್ಷವೂ ಮಕರ ಸಂಕ್ರಮಣದಲ್ಲಿ ಶ್ರೀ ಸಿದ್ಧೇಶ್ವರ ಜಾತ್ರೆಯನ್ನು ನೆರವೇರಿಸಿ ತನ್ಮೂಲಕ ದನಗಳ ಪ್ರದರ್ಶನ, ವಸ್ತುಪ್ರದರ್ಶನಗಳಲ್ಲದೆ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಗಳನ್ನು ಹಮ್ಮಿಕೊಂಡು ಸಮಾಜದ ಕಲ್ಯಾಣವನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತ ಬಂದಿರುತ್ತದೆ. ವರ್ಷಗಳುರುಳಿದಂತೆ ಸಂಸ್ಥೆಯ ಕಾರ್ಯವ್ಯಾಪ್ತಿ ಬೃಹದಾಕಾರವಾಗಿ ಬೆಳೆಯುತ್ತ ಬಂದು ಇಂದು ಇದು ನಾಡಿನ ಅತಿದೊಡ್ಡ ಸೇವಾ ಸಂಸ್ಥೆಗಳಲ್ಲಿ ಒಂದಾಗಿದೆ. ಈ ಸಂಸ್ಥೆಯ ಔನ್ನತ್ಯಕ್ಕೆ ಬಂಥನಾಳ ಶ್ರೀ ಸಂಗನ ಬಸವ ಮಹಾಸ್ವಾಮಿಗಳ ದಿವ್ಯಶಕ್ತಿ ಮತ್ತು ವಚನಪಿತಾಮಹ ಶ್ರೀ ಫ.ಗು. ಹಳಕಟ್ಟಿ ಮೊದಲಾದ ವೀರಶೈವ ಮುಖಂಡರ ತ್ಯಾಗ ನಿಷ್ಠೆಗಳೇ ಕಾರಣ.

ಮಾನವನು ಧರ್ಮಸಾಧನೆಯಿಂದ ಪಾರಮಾರ್ಥಮಾರ್ಗ ಹೊಂದಿ ಪರಿಶುದ್ಧ ಜೀವನ ಸಾಗಿಸಿ ತನ್ಮೂಲಕ ಸಮಾಜ ಸ್ವಾಸ್ಥ್ಯ ಹೊಂದಲಿ ಎಂಬ ಸದಿಚ್ಛೆಯಿಂದ ಕಾಲಕಾಲಕ್ಕೆ ವಿದ್ವಾಂಸರಿಂದ, ದಾರ್ಶನಿಕರಿಂದ, ಮಹಾಸ್ವಾಮಿಗಳವರಿಂದ ಉಪನ್ಯಾಸದ, ಪ್ರವಚನಗಳನ್ನು ಸಂಸ್ಥೆಯು ಏರ್ಪಡಿಸುತ್ತ ಬಂದಿರುತ್ತದೆ. ವೇದಾಂತಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಈ

ಸಂಸ್ಥೆಯು ಮೂಲಕ ಈ ದಿಸೆಯಲ್ಲಿ ಜನಮನವನ್ನು ತಮ್ಮ ಪ್ರವಚನಗಳಿಂದ ಹಸನಗೊಳಿಸಿದ್ದರೆ. ಅವರ ಶಿಷ್ಯರಾದ ಮತ್ತು ಮಹಾಸಾಧಕರಾದ ಶ್ರೀಸಿದ್ಧೇಶ್ವರ ಸ್ವಾಮಿಗಳು ಹದಗೊಳಿಸಿದ್ದಾರೆ. ಹಸನಾಗಿ ಹದಗೊಂಡ ಈ ಜನಮನದಲ್ಲಿ ಉದಾತ್ತ ತತ್ವಗಳನ್ನು ಬಿತ್ತಿಸುವ ಉದ್ದೇಶದಿಂದ ಶ್ರೀ ಸಿದ್ಧೇಶ್ವರ ಸಂಸ್ಥೆಯವರು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಡಾ॥ ಜಗದ್ಗುರು ಚನ್ನಬಸವರಾಜ ಶಿವಾಚಾರ್ಯ ನಿಡುಮಾಮಿಡಿಯವರನ್ನು ಪ್ರವಚನಕ್ಕಾಗಿ ಬಿನ್ನವಿಸಿಕೊಳ್ಳಲು ಮಹಾಸನ್ನಿಧಿಯವರು ಒಪ್ಪಿಕೊಂಡು ಶ್ರೀ ಶಿವಯೋಗಿ ಶಿವಾಚಾರ್ಯವಿರಚಿತ ವೀರಶೈವ ಧರ್ಮಗ್ರಂಥವಾದ ಸಿದ್ಧಾಂತ ಶಿಖಾಮಣಿಯ ತಿರುಳನ್ನು ಈ ಶ್ರಾವಣಮಾಸದಲ್ಲಿ ಪ್ರವಚನದ ಮೂಲಕ ಸಾಧ್ಯಂತವಾಗಿ ವಿವರಿಸುವರು ಮತ್ತು ತಮ್ಮ ಪ್ರವಚನವು ಶಾಶ್ವತವಾಗಿ ಉಳಿದು ಮಹಾಜನರಿಗೆ ನಿರಂತರ ಉಪಯೋಗವಾಗಲಿ ಎಂಬ ಕಳಕಳಿಯಿಂದ "ಶ್ರೀಗೋಪ್ಯಚಿಂತಾಮಣಿ"ಯನ್ನು ಬರೆದು ಅದನ್ನುಪುಸ್ತಕ ರೂಪದಲ್ಲಿ ತರುವದಕ್ಕಾಗಿ ಆಶೀರ್ವದಿಸಿರುವರು. ಈ ಪವಿತ್ರಕಾರ್ಯ ನೇರವೇರಿಸುವ ಅವಕಾಶವನ್ನು ಕೊಟ್ಟಿರುವದಕ್ಕಾಗಿ ಮಹಾಸನ್ನಿಧಿಯವರಿಗೆ ಸಂಸ್ಥೆಯು ಕೃತಜ್ಞವಾಗಿದೆ. ಪ್ರವಚನ ನಡೆದಿರುವ ನಮ್ಮ ಶಿವಾನುಭವ ಮಂಟಪ ಕಟ್ಟಡದ ಉದ್ಘಾಟನೆ ಮಹಾಸನ್ನಿಧಿಯವರ ಪರುಷ ಹಸ್ತದಿಂದ ನೆರವೇರಿರುವದನ್ನು ಈಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳುವದು ನಮಗೆಸಂತೋಷವೆನಿಸುತ್ತಿದೆ.

ಈ ಪವಿತ್ರ ಗ್ರಂಥವನ್ನು ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರ ಸ್ವಾಮಿಜಿ ಅವರು ತಮ್ಮ ಅಮೃತ ಹಸ್ತದಿಂದ ಇಂದು ಈ ಶುಭ ಪ್ರಸಂಗದಲ್ಲಿ ಬಿಡುಗಡೆ ಮಾಡಿರುವದಕ್ಕೆ ಅವರಿಗೆ ನಾವು ಋಣಿಯಾಗಿದ್ದೇವೆ.

ಕೇವಲ ಅಲ್ಪಾವಧಿಯಲ್ಲಿಯೇ ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಸಿದ್ಧಮಾಡಿಕೊಟ್ಟ ವಿಜಾಪುರ ನಗರದ ನಂದನ ಪ್ರಿಂಟಿಂಗ ಪ್ರೆಸ್ ಮಾಲಕರಾದ ಶ್ರೀ ವಾಯ್. ಎಲ್. ಭಂಟನೂರ ಇವರಿಗೆ ಮತ್ತು ಪುಸ್ತಕದ ಮುಖಪುಟವನ್ನು ಸುಂದರವಾಗಿ ಚಿತ್ರಿಸಿಕೊಟ್ಟ ಮಂಜುನಾಥ ಮಾನೆ ಇವರ ಉಪಕಾರವನ್ನೂ ಸ್ಮರಿಸುತ್ತೇವೆ.

ಎಸ್. ಡಿ. ಅಕ್ಕಿ
ಅಧ್ಯಕ್ಷ,
ಶ್ರೀ ಸಿದ್ಧೇಶ್ವರ ಸಂಸ್ಥೆ, ವಿಜಾಪುರ.

ವಿಜಾಪುರ
೧೪-೯-೧೯೮೬

॥ ಓಂ: ಶಂ. ॥

# ಪರಿವಿಡಿ

ಓಂ. ಶಂ.

## ಶ್ರೀ ಶಿವಯೋಗಿ ಶಿವಾಚಾರ್ಯ

# ಮಹಾವೀರ ಧರ್ಮಮಾರ್ಗ ಪ್ರವರ್ತಕ !

ಶಿವಾನುಭವಯೋಗಿ, ಶಿವಾನುಭವ ಸಿಂಧು ಸುಧಾಕರ, ಶಿವಾಗಮ ಶಿವತತ್ತ್ವ ಪರಿಜ್ಞಾನಿ ಎಂದು ಪ್ರಖ್ಯಾತನಾದ ಶಿವಯೋಗಿ ಶಿವಾಚಾರ್ಯನು ಭಾರತೀಯ ಸರ್ವ ಸಿದ್ಧಾಂತ ಸಾರವಾದ "ಸಿದ್ಧಾಂತ ಶಿಖಾಮಣಿ" ಯೆಂಬ ಶಿವಾದ್ವೈತ ಸಿದ್ಧಾಂತ ಗ್ರಂಥಕರ್ತೃ ! ಆತನ ಕಾಲ ಕ್ರಿ. ಶ. ೮ ನೆಯ ಶತಮಾನ ! ಅಂದರೆ ಇಂದಿಗೆ ಹನ್ನೆರಡು ನೂರು ವರುಷಗಳು ತುಂಬಿ ಹದಿ ಮೂರುನೂರು ವರುಷಗಳ ಉತ್ತರಾರ್ಧಮಾನ !

ಶಿವಯೋಗಿ ಶಿವಾಚಾರ್ಯನು ನಿಗಮಾಗಮ, ವೇದಾಂತ ಸಿದ್ಧಾಂತ, ಶಿವಶಕ್ತಿ, ಪಿಂಡಾಂಡ–ಬ್ರಹ್ಮಾಂಡ, ಅನಾದಿ–ಆದಿ–ಆಧುನಿಕ ಇವುಗಳ ಸಮಗ್ರ ಸಮನ್ವಯಾಚಾರ್ಯ. ಈ ತ್ರೈಕಾಲಿಕ ಧರ್ಮ, ದರ್ಶನ, ವೇದಾಂತ, ಸಿದ್ಧಾಂತ ಮತ್ತು ನಿಗಮಾಗಮ ಸಾಹಿತ್ಯ ಮಾನವೀಯ ಚಾರಿತ್ರ್ಯ ಇವು ಶಿವಯೋಗಿ ಶಿವಾಚಾರ್ಯನ ಅಂತರಂಗಿಕ ಚಿಚ್ಚಕ್ಷುವನ್ನು ಪರಿಪೂರ್ಣವಾಗಿ ತೆರೆಯಿಸಿ ಹೃದಯಾಕಾಶವನ್ನು ಬೆಳ್ಳಂಬೆಳಗಿಸಿ ಚಿದಾನಂದ ಪರಾಕಾಶ ಶಿವಾನುಭವಯೋಗ ವ್ಯಕ್ತಿತ್ವವನ್ನು ಬೃಹತ್ತಾಗಿ ಬೆಳೆಸಿ ಬಿತ್ತರಿಸಿವೆ. ಶಿವಾಚಾರ್ಯನ ಶಿವಾಗಮ ಪರಿಶ್ರಮಜನ್ಯ ಪರಿಜ್ಞಾನ ಪುಷ್ಪ ಪರಿಮಳ ಹತ್ತು ದಿಕ್ಕುಗಳಿಗೂ ಹರಡಿತ್ತು. ಅಂತೆಯೆ ಅವರು ಶಿವತತ್ತ್ವ ಪರಿಜ್ಞಾನ ಪೂರ್ಣ ಚಂದ್ರಮರಾಗಿದ್ದರು. ಸಾಲೋಟಗಿ ವಿಶ್ವವಿದ್ಯಾಲಯದಲ್ಲಿ ಪ್ರಾಚಾರ್ಯಕಾಗಿ ಶಿಕ್ಷಣದ ಮಟ್ಟವನ್ನು ಮೇಲಕ್ಕೆತ್ತಿ, ''ದಕ್ಷಿಣದ ತಕ್ಷಶಿಲೆ" ಯೆಂದ ಪ್ರಶಸ್ತಿಗೆ ಪಾತ್ರವನ್ನಾಗಿಸಿದ ಸತ್ಕೀರ್ತಿ ಶಿವಯೋಗಿ ಶಿವಾಚಾರ್ಯರದಾಗಿದೆ. ಇದರಿಂದಾಗಿ

ಶೈಕ್ಷಣಿಕ ಕ್ಷೇತ್ರದ ಆದರ್ಶ ಪಾತ್ರ ಅವರದಾಗಿದೆ. ಕಾವ್ಯಧರ್ಮ ಶಾಸ್ತ್ರಧರ್ಮ ಗಳನ್ನೊಳಗೊಂಡ 'ಸಿದ್ಧಾಂತ ಶಿಖಾಮಣಿ' ಎಂಬ ಉದ್ಗ್ರಂಥ ರೂಪಿಸಿ ಸಂಸ್ಕೃತ ಸಾಹಿತ್ಯಕ್ಕೆ ಕೊಟ್ಟ ಕೊಡಿಗೆ ಅಸಾಧಾರಣವಾದುದು. ಬೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತವನ್ನು ತನ್ನ ತೇಜೋಮಯವಾದ ಅನುಭಾವಿಕ ಕ್ರಾಂತಿಯಿಂದ ಕಳೆದು ಬೆಳಗಾಗಿಸಿ ಸಮಾಜವನ್ನು ಉದ್ಧರಿಸಿದ ಮಹಾ ಮಣಿಹ ಅವರದಾಗಿದೆ. ಶಿವಯೋಗ ಸಿಂಧುವಿಗೆ ಸುಧಾಕರನಂತಿದ್ದು ಶಿವ ಯೋಗವನ್ನು ಸಮೃದ್ಧವಾಗಿಸಿ ಶಿವಯೋಗಿ ಎಂಬ ತನ್ನ ಅಂಕಿತ ನಾಮ ವನ್ನು ಅನ್ವರ್ಥಕ ನಾಮವನ್ನಾಗಿಸಿಕೊಂಡ ಶಿವತತ್ತ್ವ ಸಿದ್ಧ ಪುರುಷ ಶಿವಾ ಚಾರ್ಯನು. ಇವೆಲ್ಲಕ್ಕಿಂತ ಮಿಗಿಲಾಗಿ ಮಹಾವೀರಶೈವರಿಗೆಲ್ಲ ಧರ್ಮ ಮಾರ್ಗ ಪ್ರವರ್ತಕನಾಗಿ ಧಾರ್ಮಿಕ ಕ್ಷೇತ್ರದಲ್ಲಿ ಮಹಾಕಾರಣಿಕನಾಗಿದ್ದನು. ಇವಕ್ಕೆ ಕಾರಣ ಆತನ ತಂದೆ ತಾತಂದಿರು.

**ಶಿವಾಚಾರ್ಯ ಸಂತತಿ**

ಶಿವಾಚಾರ್ಯರದೇ ಆದ ವಂಶವಿದೆ; ಸಂತತಿಯಿದೆ. ಅದು ಶಿವಯೋಗಿ ವಂಶ. ಶಿವಾಚಾರ್ಯ ಸಂತತಿ. ಈ ಸಂತತಿಯ ಮೂಲ ಪುರುಷ ಶಿವಯೋಗಿ ! ಆತನು ಶಿವಾಚಾರಸಿದ್ಧನು, ಶಿವಜ್ಞಾನಸಾಗರನು. ಶಿವಯೋಗಿಗಳಿಗೆಲ್ಲ ಅಗ್ರಣಿಯು ಆಗಿದ್ದನು. ಅಂದರೆ ಸತ್ಕ್ರಿಯೆ-ಸಮ್ಯಗ್ ಜ್ಞಾನಗಳಲ್ಲಿ ಪರಿ ಪೂರ್ಣ ಪರಿಣತನು. ಶಿವಯೋಗ ಸಂಪನ್ನತೆಯಲ್ಲಿ ಸಂಪನ್ನರಲ್ಲಿ ಶ್ರೇಷ್ಠನು ಆಗಿದ್ದನು. ಸಾಮಾಜಿಕರಲ್ಲಿ ಶಿವಭಕ್ತಿಯನ್ನು ಸಂವೃದ್ಧಿಸಿದ್ದನು. ವಿಶ್ವ ವಿದ್ವಾಂಸನಾಗಿದ್ದನು. ಆತನ ವಾಣಿ ಮತ್ತು ವಾಙ್ಮಯ ಪ್ರೌಢವಾಗಿ ಪರಿ ಶುದ್ಧವಾಗಿ ಕುವಲಯೋತ್ಸವ ಕಾರಣವಾಗಿದ್ದಿತು; ಭೂಮಂಡಲದಲ್ಲಿ ಬೆಳ ಕಾಗಿದ್ದಿತು. ಸಹೃದಯರಿಗೆ ಹಬ್ಬದಂತೆ ಸಡಗರವಾಗಿದ್ದಿತು. ಆತನ ಆ ವಾಣಿ ಮತ್ತು ವಾಙ್ಮಯಗಳಿಂದ ಸಹೃದಯರ ಹೃದಯ ನೈದಿಲೆಗಳು, ತಿಳಿವಿನ ತಾವರೆಗಳು ಅರಳುತ್ತಿದ್ದವು. ಅರಳಿ ಸಹೃದಯರು ಸಂತೋಷಿಸುತ್ತಿದ್ದರು. ಆತನ ಕಾಲ ಸುಮಾರು ಕ್ರಿ. ಶ. ಮೂರನೆಯ ಶತಮಾನವಿರಬೇಕೆಂದು ಭಾವಿಸಲಾಗಿದೆ. ಆತನ ಅಷ್ಟೊಂದು ಪ್ರತಿಭಾಶಾಲಿಯಾದ ವಾಙ್ಮಯ

ಏನೂ ಸಿಕ್ಕಿಲ್ಲ; ಇದೊಂದು ತುಂಬಿ ಬಾರದ ನಷ್ಟ; ದುರದೃಷ್ಟಕರ. ಇದ್ದರೆ ಶಿವಾಚಾರ್ಯ ಸಂಸ್ಕೃತಿಗೆ-ಸಾಹಿತ್ಯಕ್ಕೆ ಇನ್ನೂ ಹೆಚ್ಚಿನ ಶ್ರೀಮಂತಿಕೆ ಸಂಭವಿಸು ತ್ತಿತ್ತು. ಇಡೀ ಭೂಮಂಡಲದಲ್ಲಿಯೇ ಮಾನವರ ಬುದ್ಧಿ-ಭಾವ-ಹೃದಯ ಗಳೆಂಬ ತಾವರೆ ನೈದಿಲೆಗಳು ವಿಕಾಸಗೊಳ್ಳುವ ಕಮಲಯೋತ್ಸವ ಕಾರಣ ವಾದ ಭಾರತಿ ಶಿವಯೋಗಿಯದೆಂದು ಹೇಳಿರಬೇಕಾದರೆ ಅದೆಷ್ಟು ಬೃಹ ತ್ತಾದ ಮತ್ತು ಮಹತ್ತಾದ ಸಾಹಿತ್ಯ ರಾಶಿ ಸೃಷ್ಟಿಯಾಗಿರಬೇಕೆಂಬುದು ಊಹೆಗೂ ನಿಲುಕದ ಮಾತಾಗಿದೆ. ಅದೆಲ್ಲ ಕೈಗೆ ಸಿಗದಂತಾಗಿರುವ ಹತ ಭಾಗ್ಯತೆ ನಮ್ಮದಾಗಿದೆ. ಮುಂದಾದರೂ ಸಿಗುವಂತಾಗಲೆಂದು ಆ ಮಹಾ ಶಿವಾಚಾರ್ಯನಲ್ಲಿ ಪ್ರಾರ್ಥಿಸುವ ಪ್ರಯತ್ನಿಸುವ ಕರ್ತವ್ಯ ಮಾತ್ರ ನಮ್ಮದಾಗಿದೆ.

**ಮುದ್ದದೇವ ಶಿವಾಚಾರ್ಯ:**

"ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ ।
ಮುದ್ದದೇವಾಭಿಧಾಚಾರ್ಯೋ ಮೂರ್ಧನ್ಯಃ ಶಿವಯೋಗಿನಾಂ ॥
ಮುದ್ದನಾತ್ ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ ।
ಮುದ್ದದೇವ ಇತಿ ಖ್ಯಾತಾ ಸಮಾಖ್ಯಾ ಯಸ್ಯ ವಿಶ್ರುತಾ ॥

ಮೂಲ ಪುರುಷನಾದ ಆ ಶಿವಯೋಗಿಯ ಸುಪ್ರಸಿದ್ಧ ವಂಶದಲ್ಲಿ ಮುಕ್ತಾಮಣಿಯಂತೆ ನಿರ್ಮಲನೂ ಶಿವಯೋಗಿಗಳಿಗೆ ಮೂರ್ಧನ್ಯನೂ ಆಗಿ ಮುದ್ದದೇವ ಶಿವಾಚಾರ್ಯನು ಉದಿಸುವನು. ಸರ್ವ ಪ್ರಾಣಿಗಳಿಗೆ ಕಲ್ಯಾಣ ಕಾರಕನಾಗಿ, ಶರಣಾಗತರಿಗೆ ಪ್ರಬೋಧವನ್ನು ಮಾಡುವವನಾಗಿ ಇರುವು ದರಿಂದ ಮುದ್ದದೇವನೆಂಬ ಶಿವಾಚಾರ್ಯನ ಹೆಸರು ಬರೀ ಅಂಕಿತವಾಗಿ ಇರದೆ ಅನ್ವರ್ಥಕವೂ ಆಗಿತ್ತು; ವಿಖ್ಯಾತವೂ ಆಗಿತ್ತು. ಆದರಿಂದ ಅದು ನಲ್ವೆಸರು, ಸಲ್ವೆಸರು; ಚೆಲ್ವೆಸರು. 'ಮುದ್ದು' ಅದೆಷ್ಟು ಚೆನ್ನು! ಅಚ್ಚಗನ್ನಡ ಹೆಸರು ಅಚ್ಚುಮೆಚ್ಚಾದ ಹೆಸರು. ಹೆಸರಿನಲ್ಲಿ ಮಾತ್ರವಲ್ಲ; ನಡೆ ನುಡಿ ಗಳಲ್ಲಿಯೂ ಶಿವಯೋಗಿಗಳಿಗೆ-ಸರ್ವ ಪ್ರಾಣಿಗಳಿಗೆ-ಶರಣಾಗತರಿಗೆ ಅಮೂಲ್ಯ. ಸರ್ವ ಪ್ರಾಣಿಗಳಿಗೆ ಲೇಸಾಗಲೆಂದು ಬರೀ ಬಯಸಿ ಬಿಡುವಾತನಲ್ಲ ಮುದ್ದ ದೇವ ಶಿವಾಚಾರ್ಯ ಮಾಡುವಾತ! ಪ್ರಬೋಧ ಪ್ರತಿಭೆಯುಳ್ಳಾತ! ಮೂಲ ಪುರುಷನಾದ ಶಿವಯೋಗಿಯು ಶಿವಯೋಗಿಗಳಿಗೆ ಅಗ್ರಗಣ್ಯನಾಗಿ

ರುವಂತೆ ಮುದ್ದದೇವ ಶಿವಾಚಾರ್ಯನೂ ಆಗಿದ್ದನು. ಈ ವಿಶಿಷ್ಟ ವ್ಯಕ್ತಿತ್ವ ಮೂಲ ಶಿವಯೋಗಿಯಿಂದ ಮುದ್ದದೇವ ಶಿವಾಚಾರ್ಯನಲ್ಲಿಯೂ ಚ್ಯುತಿ ಯಿಲ್ಲದೆ ಕೂಡಿ ಬಂದಿದೆ.

ಮುದ್ದದೇವ ಶಿವಾಚಾರ್ಯನು ಮೂಲ ಶಿವಯೋಗಿಯ ಪುತ್ರನಲ್ಲ. ನೀಡುಗಾಲದ ಬಳಿಕ ಆತನ ವಂಶದಲ್ಲಿ ಹುಟ್ಟಿದಾತ! ಆರನೆಯ ಶತಮಾನ ದಲ್ಲಿದ್ದಾತ ! ಮುದ್ದುತನ ಆತನದೇ ಆದ ಹೊಸ ಕ್ಷಿತಿಜ! ಆದರ್ಶ ಕ್ಷಿತಿಜ !! ಕಾರುಣ್ಯಮಯ ಚೈತನ್ಯ; ಚೈತನ್ಯಮಯ ಕಾರುಣ್ಯ ಮುದ್ದದೇವ ಶಿವಾ ಚಾರ್ಯನದು. ಶಿವಯೋಗಿ ಶಿವಾಚಾರ್ಯ ವಂಶ ವಾರಿಧಿಯ ಮುಕ್ತಾಮಣಿ ಲಾವಣ್ಯ ! ಅಂತೆಯೇ ಆತನು ಶಿವಯೋಗಿ ಜನ ಮೂರ್ಧನ್ಯ. ಸರ್ವಜನ ಮಾನ್ಯ. ಆತನ ಆ ಪ್ರಬೋಧ ಪಡೆದ ಪ್ರಣತಾತ್ಮರದೇ ಪರಮ ಪುಣ್ಯ ! ಮುದ್ದದೇವನ ಖ್ಯಾತಿ ಹಬ್ಬಿತ್ತು ದಿಗ್ ದಿಗಂತ !

**ಸಿದ್ಧನಾಥ ಶಿವಾಚಾರ್ಯಃ**

ತಸ್ಯಾಸೀನ್ನಂದನಃ ಶಾಂತ: ಸಿದ್ಧನಾಥಾಭಿದಃ ಶುಚಿ: ।
ಶಿವ ಸಿದ್ಧಾಂತನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕ: ॥
ವೀರಶೈವ ಶಿಖಾರತ್ನಂ ವಿಶಿಷ್ಟಾಚಾರ ಸಂಪದಂ ।
ಶಿವಜ್ಞಾನ ಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ ॥
ಯದಾಚಾರ್ಯಕುಲೇ ಜಾತಾ ಸತಾಮಾಚಾರ ಮಾತೃಕಾ ।
ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತವಿಪ್ಲವಾ ॥ ...."

ಮುದ್ದದೇವ ಶಿವಾಚಾರ್ಯರ ಮಗ ಸಿದ್ಧನಾಥ ಶಿವಾಚಾರ್ಯನು. ನಂದನ ಎಂದು ಹೇಳಲು ತಕ್ಕ ಗುಣಧರ್ಮ ಶಕ್ತಿ ದೀಪ್ತಿಗಳುಳ್ಳವನು. ಅಂತೆಯೇ ಶಾಂತನು; ಸಮಾಧಾನ ಸ್ವಭಾವದಿಂದ ಶಾಂತರಸ ಸ್ವರೂಪನು. ಶುಚಿಯು; ಅಂದರೆ ನಿರ್ಮಲನೂ ಪಾವನಾತ್ಮನು. ಮಿಗಿಲಾಗಿ ಮೂಲ ತತ್ತ್ವವಾದ ಶಿವ ತತ್ತ್ವದ ಸಿದ್ಧಾಂತ ನಿರ್ಣೇತನು. ಅದರಿಂದ ಆತನು ಶಿವಾಚಾರ್ಯನು. ಶಿವಾತ್ಮ ಸ್ವರೂಪನು. ಶಿವಾಚಾರ್ಯನಾದ ಶಿವ ಸಿದ್ಧಾಂತ ನಿರ್ಣೇತನಾದ ಸಿದ್ಧನಾಥನನ್ನು ಸಿದ್ಧರಾಮನೆಂದು ಹೇಳುವುದರಲ್ಲಿ ಏನೂ ಅರ್ಥವಿಲ್ಲ; ಏನೂ ಸಂಬಂಧವಿಲ್ಲ.

ಅಂತೆಯೆ ಈತನ ತಂದೆ ಮುದ್ದದೇವನನ್ನು ಮುದ್ದಗೌಡನೆಂದು ಹೇಳುವುದರಲ್ಲಿ ಏನೂ ಔಚಿತ್ಯವಿಲ್ಲ; ಯಥಾರ್ಥವೂ ಇಲ್ಲ. ಸಿದ್ಧನಾಥ ಶಿವಾಚಾರ್ಯನು ವಿಶಿಷ್ಟವಾಗಿ 'ವೀರಶೈವ ಶಿಖಾರತ್ನ' ಎಂಬ ಪ್ರಶಸ್ತಿಗೆ ಪಾತ್ರನಾದವನು. ಜೊತೆಗೆ ವಿಶಿಷ್ಟಚಾರ ಶ್ರೀಮಂತನು; ಶಿವಜ್ಞಾನ ಮಹಾಸಾಗರನು; ಎಂದು ಅಂದಿನ ಇಂದಿನ ಮುಂದಿನ ದೇಶಿಕರ ಪ್ರಶಂಸೆಗೆ ಪ್ರಶಸ್ತ ಪಾತ್ರನು. ಶಿವಯೋಗಿ, ಮುದ್ದದೇವ, ಸಿದ್ಧನಾಥಾದಿ ಶಿವಾಚಾರ್ಯರ ವಂಶದಲ್ಲಿ ಸಂತರಾಚಾರ ಮಾತೃಕೆಯಾದ ಶಿವಭಕ್ತಿ ಜನಿಸಿ, ಯಾವ ವಿಪ್ಲವಕ್ಕೆ ಅಂದರೆ ಅಡೆತಡೆಗೆ ಅವಕಾಶವಿಲ್ಲದೆ ಸ್ಥಿರವಾಗಿದೆ. ಶಿವಾಚಾರ–ಶಿವಭಕ್ತಿ ಸಂಜನಕರು ಸಂವರ್ಧಕರು ಧ್ರುವಕರ್ತೃರು ಶಿವಾಚಾರ್ಯರು. ಬೇರೆ ಯಾರ ದಾಳಿಗೆ ಒಳಗಾಗದಂತೆ ಮಾಡಿದವರು ಶಿವಾಚಾರ್ಯರು. ಅವರಲ್ಲಿ ಸಿದ್ಧನಾಥ ಶಿವಾಚಾರ್ಯರು–ಪ್ರಮುಖರು; ಪ್ರಬುದ್ಧರು. ಈತನ ತಂದೆ ಮುದ್ದದೇವನು ಶಿವಯೋಗಿ ಸಮುದಾಯಕ್ಕೆ ಮೂರ್ಧನ್ಯನಾಗಿದ್ದರೆ ಆತನ ನಂದನನಾದ ಸಿದ್ಧನಾಥನು ಶಿವಾಚಾರ್ಯವೃಂದಕ್ಕೆ ರತ್ನಪ್ರಾಯನು. ಶಿವಸಿದ್ಧಾಂತ ನಿರ್ಣಯ ಕರ್ತನು. ಶಿವಾಚಾರ ಶ್ರೀಮಂತನು; ಶಿವಜ್ಞಾನ ಸಮುದ್ರನು. ಅಸಾಧಾರಣ ವ್ಯಕ್ತಿತ್ವವುಳ್ಳಾತನು. ವೀರಶೈವ ಧರ್ಮಕ್ಕೆ ವಿದ್ಯುಚ್ಚೇತನ ತಂದವರು; ಶಿವಸಿದ್ಧಾಂತ ದಿಗಂತಗೊಳಿಸಿದವರು; ಶಿವಾಚಾರ ಶಿವವಿಚಾರ ಶಿವಭಕ್ತಿಗಳಿಗೆ ಕಾಯಕಲ್ಪವನ್ನುಂಟು ಮಾಡಿದವರೆಂದು ಹೇಳಿದರೆ ಅವರ ವ್ಯಕ್ತಿವೈಭವ ಪ್ರಭಾವಗಳಿಗೆ ಬೇರೆ ಬಣ್ಣನೆ ಬೇಕಿಲ್ಲ. ಇಂತಹ ಮಹಂತ ಶಿವಾಚಾರ್ಯರ ನಂದನರು ಶಿವಯೋಗಿ ಶಿವಾಚಾರ್ಯರು.

**ಶಿವಯೋಗಿ ಶಿವಾಚಾರ್ಯ :**

''ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ ॥
ಚಿದಾನಂದ ಪರಾಕಾಶ ಶಿವಾನುಭವಯೋಗತಃ ।
ಶಿವಯೋಗೀತಿ ನಾಮೋಕ್ತಿರ್ಯಸ್ಯ ಯಾಥಾರ್ಥ್ಯಯೋಗಿನೀ ॥
ಶಿವಾಗಮ ಪರಿಜ್ಞಾನ ಪರಿಪಾಕ ಸುಗಂಧಿನಾ ।
ಯದೀಯಕೀರ್ತಿಪುಷ್ಪೇಣ ವಾಸಿತಂ ಹರಿತಾಂ ಮುಖಂ ॥ ...''

ಶಿವಯೋಗಿ ಶಿವಾಚಾರ್ಯವರ್ಯನ ತಂದೆ ವೀರಶಿವಾಚಾರ್ಯ ಶಿಖಾರತ್ನ ! ಶಿವಸಿದ್ಧಾಂತ ನಿರ್ಣೇತಃ !! ಅಂತವನ ಆ ಸಚ್ಛಿಪ್ಪಿನೊಡಲಲ್ಲಿ ಶಿವಯೋಗಿ ಶಿವಾಚಾರ್ಯನು ಸಿಂಧುವಿಗೆ ಸುಧಾಕರನಂತೆ ಹುಟ್ಟಿದನು. ಶಿವಾಚಾರ್ಯ ಸಂತತಿಯ ಮೂಲ ಮಹಾ ಪುರುಷನ 'ಶಿವಯೋಗಿ' ಎಂಬ ನಿರುಪಮ ಯೋಗಾಂಕಿತ ನಾಮಧೇಯವನ್ನಿಟ್ಟರು. ಸುಧಾಕರನಂತೆ ಕಾಂತಿ ಶಾಂತಿ ಗಳನ್ನು ತೊಟ್ಟರು. ಶಿವಯೋಗ-ಶಿವಾನುಭವಗಳೆಂಬ ಸುಧಾ ಸಿಂಧುಗಳೆರ ಡನ್ನು ಉಕ್ಕಂದವಾಗಿ ಉಕ್ಕಿಸಿ ಉಜ್ವಲಿಸಿ ಉಚ್ಛ್ರಾಯಗೊಳಿಸಿದರು. ಅಂತೆ ಯೇ ಶಿವಾಚಾರ್ಯನು ಶ್ರೇಷ್ಠ ಶಿವಯೋಗಿಯಾದಂತೆ, ವರಿಷ್ಠ ಚಿದಾನಂದ ಪರಾಕಾಶ ಶಿವಾನುಭವಯೋಗಿಯೂ ಆಗಿದ್ದನು. ಶಿವಾಚಾರ್ಯನನ್ನು ಮೀರುವ ಶಿವಯೋಗಿಯಾಗಲಿ, ಶಿವಾನುಭವಯೋಗಿಯಾಗಲಿ ಇಂದಿಗೂ ಯಾರೂ ಇಲ್ಲ. ಆತನ ಆ ಶಿವಾಗಮ ಪರಿಜ್ಞಾನದ ಪರಿಪಾಕ ಪರಿಮಳ ಆ ಶಿವಾಚಾರ್ಯನ ಕೀರ್ತಿ ಕುಸುಮವನ್ನಾಶ್ರಯಿಸಿ ಹತ್ತು ದಿಕ್ಕುಗಳನ್ನು ಕಂಪು ಗೊಳಿಸಿತ್ತು. ಹೆಂಪು ಗೊಳಿಸಿತ್ತು ಅಲ್ಲದೆ

"ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ ।
ಬೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತಾಂಶುಮಾಲಿನಾ ॥
ಸ ಮಹಾವೀರಶೈವಾನಾಂ ಧರ್ಮಮಾರ್ಗಪ್ರವರ್ತಕಃ ।
ಶಿವತತ್ತ್ವಪರಿಜ್ಞಾನಚಂದ್ರಿಕಾವೃತಚಂದ್ರಮಾಃ ॥...."

ಇಲ್ಲಿದೆ ಶಿವಾಚಾರ್ಯನ ಜೀವನ ಸುವರ್ಣದ ಓರೆಗಲ್ಲು. ಆತನ ಸಾಮಾ ಜಿಕ ಹೋರಾಟ ಜೀವನದ ಸತ್ಯ ಸಂದೇಶವನ್ನು ಸಾರುವ ಶಾಸನದ ನಿಡುಗಲ್ಲು. ಶಿವಯೋಗಿ ಶಿವಾಚಾರ್ಯನ ಕಾಲ ಎಂಟನೆಯ ಶತಮಾನ. ಆದಿ ಶಂಕರಾಚಾರ್ಯರ ಸಮಕಾಲೀನರು. ಆಗ ಬೌದ್ಧರ ದಾಳಿ ಬಲವಾಗಿ ಹರ ಡಿತ್ತು. ವೀರಶೈವರ ಭಾವ ಪೂರ್ಣ ಭಕ್ತಿ ಜೀವನವನ್ನು ಬರಡುಗೊಳಿಸುವ ಮೂಲಕ ಹತವೀರ್ಯರನ್ನಾಗಿಸುತ್ತಿತ್ತು. ವೀರಶೈವರು ಬೌದ್ಧರ ಬೌದ್ಧಿಕ ಸಿದ್ಧಾಂತ ಪ್ರಭಾವಕ್ಕೆ ಆಕರ್ಷಿತರಾಗುತ್ತಿದ್ದರು. ಬೌದ್ಧರಿಗೆ ದಾನ ದತ್ತಿ ಗಳನ್ನು ಕೊಡ ಮಾಡತೊಡಗಿದರಲ್ಲದೆ ಮತಾಂತರವಾಗುವುದಕ್ಕು ಮುಂದು

ಮೆರೆಯುತ್ತಿದ್ದರು. ಬೌದ್ಧ ಧರ್ಮ ದರ್ಶನಗಳ ಪ್ರಾಬಲ್ಯ ಹೆಚ್ಚತೊಡಗಿದ್ದಿತು. ಮತ್ತು ಬೌದ್ಧವಿಹಾರಗಳು ಅಲ್ಲಲ್ಲಿ ಪ್ರತಿಷ್ಠಾನಗೊಂಡು ಪ್ರವರ್ಧಿಸತೊಡಗಿದ್ದವು. ಆಗ ಶಿವಯೋಗಿ ಶಿವಾಚಾರ್ಯನು 'ಬೌದ್ಧಾದಿ ಪ್ರತಿ ಸಿದ್ಧಾಂತವೆಂಬ ಮಹಾಂಧಕಾರಕ್ಕೆ ಪ್ರಚಂಡ ಸೂರ್ಯ'ನಾಗಿ ಪ್ರಜ್ವಲಿಸಿದನು. ಬೌದ್ಧೀಯ ಕಾಳ್ಗತ್ತಲೆಯನ್ನು ತನ್ನ ತೀವ್ರ ದೀಪ್ತಿಯಿಂದ ಹೊಡೆದೋಡಿಸಿ ಸನಾತನ ಭಕ್ತಿ ಭಾವವನ್ನು ರಕ್ಷಿಸಿ, ವೀರಶೈವರಿಗೆಲ್ಲ ಮಾರ್ಗದರ್ಶಕನಾದನು. ಅದು ಚೈತನ್ಯಪೂರ್ಣ ಮಹಾ ಮಾರ್ಗದರ್ಶನ; ನಿರುಪಮ ನೇತೃತ್ವ ಸಾಧನ; ಸಿದ್ಧಿಯೂ ಅಹುದು. ಶಿವಾಚಾರ್ಯನು ತನ್ನ ಸತ್ಯ ಸಂಸ್ಕೃತಿ ಸಾಹಿತ್ಯಗಳಿಂದ (ಸಿದ್ಧಾಂತ ಶಿಖಾಮಣಿಯ ಮೂಲಕ) ವೀರಶೈವರಲ್ಲಿ ವ್ಯಾಪಕವಾದ ವಿಸ್ಮಯಕಾರಕವಾದ ಜಾಗೃತಿಯನ್ನು ತುಂಬಿ ತೊಳಗಿಸಿದನು. ಪ್ರತಿಸಿದ್ಧಾಂತಗಳು ಅಣಗಿ ಹೋಗುವಂತಹ ಪ್ರಬುದ್ಧವೂ ಪ್ರಪೂರ್ಣವೂ ಅದ ಶಿವಾದ್ವೈತ ಸಿದ್ಧಾಂತ ಅಂದರೆ ವೀರಶೈವ ಷಟ್‌ಸ್ಥಲ ಸಿದ್ಧಾಂತದ ದಿವ್ಯಧ್ವನಿಯನ್ನು ಮೊಳಗಿಸುವನು; ದಿವ್ಯದೀಪ್ತಿಯನ್ನು ಬೆಳಗಿಸುವನು. ಶಿವತತ್ತ್ವದ ಪರಿಜ್ಞಾನವೆಂಬ ಪರಿಪೂರ್ಣ ಚಂದ್ರಿಕೆಯನ್ನು ಎಲ್ಲೆಲ್ಲಿಯೂ ಚೆಲ್ಲುವರಿಸಿ ಚಿಚ್ಚಂದ್ರಮನಾಗಿ ಬೆಳ್ಳಂ ಬೆಳಗಿದನು. ವೀರಶೈವೀಯ ಉಚ್ಚ ಜೀವನದ ಉತ್ಕ್ರಾಂತಿಯನ್ನೆಸಗಿದನು. ಇದರಿಂದಾಗಿ ಅಂದಿನ ಆ ಮಹಾ ಮಹಾ ವೀರಶೈವರು ಕಣ್ಣು ತೆರೆಯುವಂತಾಯಿತು. ಮುಂದುವರಿಯಲು ಹೆದ್ದಾರಿ ಹಾಕಿಯಾಯಿತು. ಅದು ಏಕೋತ್ತರ ಶತಸ್ಥಲಗಳನ್ನೊಳಗೊಂಡ ಸನಾತನ ಷಟ್‌ಸ್ಥಲ ಮಹಾಮಾರ್ಗ ! ಅದರ ಪ್ರವರ್ತಕನಾಗಿ ಪ್ರಕಾಶಗೊಂಡನು; ಪ್ರಖ್ಯಾತಿಗೆ ಬಂದನು. ತನಗಿದ್ದ ಆ ಚಿದಾನಂದ ಪರಾಕಾಶ ಶಿವಾನುಭವ ಯೋಗ ಪ್ರತಿಭೆಯನ್ನು ಷಟ್‌ಸ್ಥಲ ಸಿದ್ಧಾಂತದ ಮೇಲೆ 'ಸಿದ್ಧಾಂತ ಶಿಖಾಮಣಿಯ ಮಾಧ್ಯಮದಲ್ಲಿ ವಿನ್ಯಾಸಗೊಳಿಸಿ ಪ್ರಕಾಶಪಡಿಸಿದನು. ಇದರಿಂದ ವೀರಶೈವದ ವೈಶಿಷ್ಟ್ಯ ಸೈದ್ಧಾಂತಿಕ ಶ್ರೀಮಂತಿಕೆಗೆ ಸರ್ವಾಂಗೀಣವಾಗಿ ಕಾರಣವಾಯಿತು. ವೀರಶೈವ ಧರ್ಮ ಕಾಯಕ್ಕೆ ಕಾಯಕಲ್ಪವುಂಟಾಯಿತು. ಅಂತೆಯೇ ಶಿವಯೋಗಿ ಶಿವಾಚಾರ್ಯನು "ಮಹಾವೀರಶೈವ ಧರ್ಮಮಾರ್ಗ ಪ್ರವರ್ತಕ" ನೆಂದು ಪ್ರಖ್ಯಾತನಾದನು.

ಓಂ. ಶಂ.

## ಸಿದ್ಧಾಂತ ಶಿಖಾಮಣಿ

# ಶ್ರೀ ಗೋಪ್ಯ ಚಿಂತಾಮಣಿ

"ಶ್ರೀ ವೇದಾಗಮ ವೀರಶೈವ ಸರಣಿಂ ಶ್ರೀ ಷಟ್‌ಸ್ಥಲೋದ್ಧ್ಯನ್ಮಣಿಂ
ಶ್ರೀ ಜೀವೇಶ್ವರಯೋಗಪದ್ಮತರಣಿಂ ಶ್ರೀ ಗೋಪ್ಯ ಚಿಂತಾಮಣಿಂ
ಶ್ರೀ ಸಿದ್ಧಾಂತ ಶಿಖಾಮಣಿಂ ಲಿಖತಿ ಯಸ್ತಂ ಲೇಖಯತ್ಯಾದರಾತ್
ಶ್ರೋತಾ ಶ್ರಾವಯಿತಾ ಸ ಯಾತಿ ವಿಮಲಾಂ ಭುಕ್ತಿಂ ಚ ಮುಕ್ತಿಂ ಪರಾಂ॥"

ಕೋರುವುದನ್ನೆಲ್ಲ ಕೊಡಬಲ್ಲುದು ಚಿಂತಾಮಣಿ. ನವರತ್ನಗಳಲ್ಲಿ ಶ್ರೇಷ್ಠ ವಾದುದು ಚಿಂತಾಮಣಿ. ವಿಶ್ವದಲ್ಲಿ ಇದಿರುವುದು ಎರಡೇ ಎರಡು. ಒಂದಂ ದೇವಲೋಕದ ದಿವ್ಯರತ್ನ; ಇನ್ನೊಂದು ಈ ಲೋಕದ ಶ್ರೀ ಗೋಪ್ಯ ಚಿಂತಾ ರತ್ನ ! ಇವೆರಡರಲ್ಲಿ ಮೊದಲಿನದು ಅಲಭ್ಯ; ಶಬ್ದ ಮಾತ್ರನಿಷ್ಠ. ಎರಡನೆ ಯದು ಶ್ರೀ ಗೋಪ್ಯ ಚಿಂತಾಮಣಿ ಲಭ್ಯ; ಗೋಪ್ಯವಾದರೂ ಸಕಲಾರ್ಥ ಪ್ರಕಾಶಕ ! ಸಕಲ ಶ್ರೀ ಪ್ರದಾಯಕ !! ಇದರಲ್ಲಿ ಅಂದರೆ ಸಿದ್ಧಾಂತ ಶಿಖಾ ಮಣಿಯಲ್ಲಿ ತಾತ್ತ್ವಿಕಾಚಾರ–ವಿಚಾರಾನುಭವ ಗುಟ್ಟುಗಳು ತುಂಬಿಕೊಂಡಿವೆ. ತಾತ್ತ್ವಿಕಾಚಾರ ವಿಚಾರಾನುಭವಗಳೇ ಶಾಶ್ವತ ಸಂಪತ್ತುಗಳು. ಇವು ಇದರಲ್ಲಿ ಮೊಗೆದಷ್ಟು ಹೊಮ್ಮಿ ಬರುತ್ತವೆ. ಸಿದ್ಧಾಂತ ಶಿಖಾಮಣಿ ಸಿದ್ಧಾಂತಾಮೃತಸಾಗರ; ಸಿದ್ಧಾಂತ ರತ್ನಾಕರ ! 'ಶ್ರೀ ಗೋಪ್ಯ ಚಿಂತಾಮಣಿ' ಎಂಬಲ್ಲಿನ ಶ್ರೀ ಪ್ರಪದ ಧ್ವನಿಪೂರ್ಣ, ಭಾವಪೂರ್ಣ; ಅದಕ್ಕೆ ಅನಂತಮುಖ, ಅದು ಸಕಲಾರ್ಥ ಪ್ರಕಾಶಕ; ಪರಮಾರ್ಥ ಪ್ರತಿಪಾದಕ. ಇದು ನಮ್ಮ ಕಪೋಲ ಕಲ್ಪಿತ ಮಾತಲ್ಲ; ಇದೋ ಕೇಳಿ:

"ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶಕಂ ।...
ವೀರಶೈವಮಹಾ ತಂತ್ರಮೇಕೋತ್ತರ ಶತಸ್ಥಲಂ

ಅನುಗ್ರಹಾಯ ಲೋಕಾನಾಮಭ್ಯಧಾತ್ ಸುಧಿಯಾಂವರ:॥
ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಂ ।
ನಾಮ್ನಾ ಪ್ರತೀಯತೇ ಲೋಕೇ ಯತ್ ಸಿದ್ಧಾಂತ ಶಿಖಾಮಣಿ:॥"

ಸಿದ್ಧಾಂತ ಶಿಖಾಮಣಿ ವೀರಶೈವರ ಸರ್ವಸ್ವ; ಸರ್ವಾಂಗೀಣಸಾರ. ಅಲ್ಲದೆ ಸಕಲಾರ್ಥ ಪ್ರಕಾಶಕವಾಗಿ ಸರ್ವಮಾನ್ಯ. ಸಮ್ಯಗ್‌ದರ್ಶನ. ವೀರಶೈವ ಸರ್ವಸ್ವವಾದರೂ ವಿಶ್ವಕಲ್ಯಾಣಕಾರಕ! ಸಮುನ್ನತ ಸಿದ್ಧಾಂತ! ಅಂತೆಯೇ ಇದನ್ನು 'ವೀರಶೈವ ಮಹಾತಂತ್ರ' ಎಂದು, 'ಏಕೋತ್ತರ ಶತಸ್ಥಲ' ಎಂದು 'ಸಿದ್ಧಾಂತ ಶಿಖಾಮಣಿ' ಎಂದು ಕರೆಯೋಣವಾಗಿದೆ. ಇದಲ್ಲದೆ ಇದಕ್ಕೆ 'ರೇಣುಕಾಗಮ' 'ರೆಣುಕ ಗೀತೆ'ಯೆಂದು ಹೆಸರುಗಳಿವೆ. ಇದು ಸರ್ವಶಿವಾಗ ಮಗಳ ಸಾರಸರ್ವಸ್ವವಾಗಿದೆ. ಸರ್ವೋತ್ತಮವಾಗಿದೆ, ಇದಕ್ಕೆ ಉತ್ತಮ ವಾದುದು ಇನ್ನೊಂದಿಲ್ಲ. ಇದು ಅಪ್ರತಿಮ,

''ಅನುಗತ ಸಕಲಾರ್ಥೇ ಶೈವತಂತ್ರೈ: ಸಮಸ್ತೈ:
ಪ್ರಕಟಿತ ಶಿವಬೋಧಾದ್ವೈತ ಭಾವ ಪ್ರಸಾದೇ ।
ವಿಧದಕು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾ:
ಪಶುಪತಿಮತಸಾರೇ ಪಂಡಿತಶ್ಲಾಘನೀಯೇ ॥"

ಸಮಸ್ತ ವೀರಶೈವಾಗಮಗಳಿಗೆ ಸಂಬಂಧಪಟ್ಟ ಮತ್ತು ಸಮ್ಮತವಾದ ಸಮಸ್ತಾರ್ಥವುಳ್ಳದು ಈ ಕೃತಿರತ್ನ ಮತ್ತು ಪ್ರಕಾಶ ಪಡಿಸಿದ ಶಿವಾದ್ವೈತ ಸಿದ್ಧಾಂತದ ಭಾವ ಪ್ರಸಾದವುಳ್ಳದು ಈ ಕೃತಿರತ್ನ ಅಲ್ಲದೆ ಅನಾದಿ ರುದ್ರ ದೇವನಿಂದ ರಚಿತವಾದ (ಉತ್ಪಾದಿತವಾದ) ಪಶುಪತಿ ಮತದ ತಿರುಳಾ ದುದರಿಂದ ಪಂಡಿತರಿಂದ ಶ್ಲಾಘನೀಯವಾದುದು ಈ ಗ್ರಂಥರತ್ನ ಇದರಲ್ಲಿ ವಿಶಿಷ್ಟರಾದ ವೀರಶೈವರು ಆದರಾಸಕ್ತಿಗಳನ್ನು ವಹಿಸಬೇಕು. 'ಭಾವ ಪ್ರಸಾದ' ಪದ ಪ್ರಯೋಗ ಈ ಗ್ರಂಥ ಘನತೆಯನ್ನು ಪ್ರಭಾವವನ್ನು ಹೆಚ್ಚಿಸುತ್ತದೆ ಭಾವಪೂರ್ಣ ಪ್ರಾಸಾದಿಕವಾಣಿಯಲ್ಲಿ ಶಿವಾದ್ವೈತ ಸಿದ್ಧಾಂತ ಮಹಂತ ಗ್ರಂಥ ಪ್ರತಿಪಾದಿತವಾಗಿದೆಯೆಂಬ ಸುಳ್ನುಡಿ ಸತ್ಯಕ್ಕೆ ಸತ್ಯವೆಂದೆ

ನಿಸಬೇಕಾದರೆ ಸಹೃದಯರು ಸಮಗ್ರವಾಗಿ ಸಮಾಹಿತ ಚಿತ್ತರಾಗಿ ಅಧ್ಯಯ ನಿಸಬೇಕು: ಚಿಂತನಿಸಬೇಕು,

"ವೇದ ಸಿದ್ಧಾಂತಯೋರೈಕ್ಯಮೇಕಾರ್ಥ ಪ್ರತಿಪಾದನಾತ್ ॥
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ॥"

ಈ ಸಿದ್ಧಾಂತ ಶಿಖಾಮಣಿಯೆಂಬ ಚಿಂತಾರತ್ನವು ವೇದಾಂತ ಸಿದ್ಧಾಂತ ಗಳೆರಡರ ಸಮನ್ವಯವಾಗಿರುವ ಕಾರಣ ಅಂದರೆ ಏಕಾರ್ಥ ಪ್ರತಿಪಾದನ ಮಾಡುವುದರಿಂದ ವೇದಾಂತಗಳಿಗೂ ಸಿದ್ಧಾಂತಿಗಳಿಗೂ, ಸಮಾನ ಪ್ರಮಾಣ ಕೃತಿಯಾಗಿ ಕಳೆಗೊಂಡಿದೆ ಸಮದರ್ಶಿಯಾಗಿ ಸಮನಿಸಿದೆ.

ಎಲ್ಲಕ್ಕೂ ಮಿಗಿಲಾಗಿ ಈ ಸಿದ್ಧಾಂತ ಗ್ರಂಥ ಚಿಂತಾರತ್ನ 'ಪಶುಪತಿ ಮತಸಾರ'ವಾಗಿ ರೂಪಗೊಂಡಿರುವುದನ್ನು ವಿಮರ್ಶಕರು ಪರಾಮರ್ಶಿಸ ಬೇಕು. ಇದರಲ್ಲಿ ಅಭಿವ್ಯಕ್ತವಾಗಿದೆ ಅನಾದಿ ಮಹಾಪಾಶುಪತ ಶಿವಾಚಾರ ಅಂದರೆ ಅನಾದಿವೀರಶೈವ ಧರ್ಮದ ಇತಿಹಾಸ ! ಇದರಲ್ಲಿ ಉಕ್ತವಾದ ಪಶು ಪತಿ ಮತವು ಶೈವ ಮತಗಳಿಗಿಂತ ಪೂರ್ವದ್ದಾಗಿದೆ. ವ್ಯಕ್ತಿ ಸಂಬಂಧ ಶೈವ ಮತ ತತ್ತ್ವಸಂಬಂಧ ಶೈವಮತ ಎಂದು ಇಬ್ಬಗೆ! ಇದನರಿಯದ ಇಂದಿನ ಹಲವರು ಶೈವಪದ ಪ್ರಯೋಗವಿರುವಲ್ಲೆಲ್ಲಾ ವ್ಯಕ್ತಿನಿಷ್ಠ ಶೈವ ಮತ ವೆಂದು ಅರ್ಥಿಸುವುದು ಅಪಕ್ವ ವಿಚಾರದಿಂದ ಕೂಡಿದುದಾಗಿದೆ. ಇದಿರಲಿ.

"ತದಿದಂ ಸರ್ವ ಸಿದ್ಧಾಂತ ಸಾರಾಣಾಮುತ್ತಮೋತ್ತಮಂ ।
ವೇದ ವೇದಾಂತ ಸರ್ವಸ್ವಂ ವಿದ್ಯಾಚಾರ ಪ್ರಕಾಶಕಂ ॥
ಅವಾದೀತ್ ಸರ್ವಲೋಕಾನಾಂ ಸಿದ್ಧಯೇ ........।"

ಇದು ಈ ಶ್ರೀ ಗೋಪ್ಯ ಚಿಂತಾಮಣಿಯು ಸರ್ವ ಸಿದ್ಧಾಂತಗಳ ಸಾರಕ್ಕೆ ಸಾರವಾದುದು; ಉತ್ತಮೋತ್ತಮವಾದಂದು. ವೇದ ವೇದಾಂತ ಸರ್ವಸ್ವವಾದುದು; ಜ್ಞಾನಕ್ರಿಯಾ ಪ್ರಕಾಶಕವಾದುದು. ಸರ್ವಲೋಕಗಳ ಸಿದ್ಧಿಗಾಗಿ ಸೃಜನಗೊಂಡುದು ಈ ಮಾತು ಇಲ್ಲಿ ಮುಖ್ಯ. ಸರ್ವಜನರಿಗೆ

ಸಂಕಲ್ಪಿಸಿದುದನ್ನೆಲ್ಲ ಸಿದ್ಧಿಸಿಕೊಡುವಂತಹದು, ಅದರಿಂದ ಈ ಸಿದ್ಧಾಂತ ಶಿಖಾಮಣಿ ಶ್ರೀ ಗೋಪ್ಯಚಿಂತಾಮಣಿ !

ಸಿದ್ಧಾಂತ ಶಿಖಾಮಣಿ ವ್ಯಕ್ತವಾಗಿ ಶ್ರೀ ಷಟ್‌ಸ್ಥಲಲೋದ್ಯನ್ಮಣಿ ! ಆದರೆ ಗೋಪ್ಯವಾಗಿ ಸಕಲಾರ್ಥ ಪ್ರಕಾಶಕ ಚಿಂತಾಮಣಿ!! ಅದು ಮೇಲೆ ನೋಡಿದರೆ ಷಟ್‌ಸ್ಥಲ ರೂಪಿಸಿದ ಕೃತಿಯೆಂದು ಕಂಡರೂ ಅದರ ಒಳ ಹೊಕ್ಕು ಸಮೀಕ್ಷಿಸಿದರೆ ಎಲ್ಲ ಧರ್ಮಗಳ ಎಲ್ಲ ದರ್ಶನಗಳ ವಿಚಾರಗಳು ಪರಿಪ್ಲುತವಾಗಿವೆ. ಜೀವನದ ಏನೆಲ್ಲ ಮುಖಗಳನ್ನು ವಿಶಿಷ್ಟಾನುಭೂತಿಯಲ್ಲಿ ಪರಿಸ್ಫೂರ್ತಿಯಲ್ಲಿ ಪರಾಮರ್ಶಿಸಿ ಪ್ರಕಾಶ ಪಡಿಸಿದೆ; ಅದರಿಂದ ಅದು 'ಶ್ರೀ ಜೀವೇಶ್ವರ ಯೋಗ ಪದ್ಮತರಣಿ'ಯೂ ಆಗಿದೆ. ಈಜೀವನು ಜೀವನದ ಏನೆಲ್ಲ ಒಳ್ಳಿತು ಒಳ್ಳಿತುಗಳನ್ನು ಸಂಪಾದಿಸಿಕೊಂಡು ಶಿವದಯೋಗವೆಂಬ ಪದ್ಮವನ್ನು ಅರಳಿಸಿ ಪರಿಮಳಿಸಿಕೊಳ್ಳಬೇಕಾದರೆ ಸಿದ್ಧಾಂತ ಶಿಖಾಮಣಿ ಯೆಂಬ ಚಿತ್ತರಣಿ ಅನಿವಾರ್ಯ. ಶಿವಾತ್ಮಕ ಯೌಗಿಕ ಶಕ್ತಿವಿಕಾಸವಾಗ ಬೇಕಾಗುತ್ತದೆ, ಶ್ರೀ ಗೋಪ್ಯ ಚಿಂತಾಮಣಿಯನ್ನು ಆಶ್ರಯಿಸಲೇ ಬೇಕಾಗುತ್ತದೆ. ಆಗ ಜೀವನಕ್ಕೆ ಅತ್ಯಗತ್ಯಬೇಕಾದ ಎಲ್ಲ ಮೌಲ್ಯಗಳು ಲಭ್ಯ ವಾಗುತ್ತವೆ.



ಓಂ ಶಂ

## ವಿಶ್ವ ಮಾನವೋದ್ಧಾರ

# ರೇಣುಕಗೀತೆಯ ಉದ್ದೇಶ !

ಜನ ಜೀವನದ ಎಲ್ಲ ಮುಖಗಳನ್ನು ಎಲ್ಲ ಅಂಗಗಳನ್ನು ಅಶಿವ ಪಥದಿಂದ ಶಿವಪಥಕ್ಕೆ ಹಚ್ಚಿ ಸಕಲಾರ್ಥಗಳು ಸರ್ವರಿಗೆ ಒದಗುವಂತೆ ಮಾಡುವ ಸನಾತನ ಶಿವಾಗಮ ಸಾರವಾದ, ರೇಣುಕಾಗಮವೆಂದು ಹೆಸರಾದ ರೇಣುಕ ಗೀತೆಯು ಭಾರತೀಯ ಸಿದ್ಧಾಂತಗಳಲ್ಲಿ ಬಾನೆತ್ತರಕ್ಕಿದೆ. ಅಲ್ಲದೆ ಮಾನವ ಜೀವನ ಸಿದ್ಧಾಂತ (ನಿರ್ಣಯ) ಪ್ರತಿಪಾದನೆಯಲ್ಲಿ ವಿಶ್ವ ಸಾಹಿತ್ಯ ದಲ್ಲಿಯೇ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ. ಇದಿತ್ತ ಸತ್ಯ ಸಂದೇಶದಂತೆ ನಡೆದಲ್ಲಿ ಇಡೀ ವಿಶ್ವಮಾನವರ ಉದ್ಧಾರವಾಗುವಲ್ಲಿ ಯಾವ ಸಂಶಯವಿಲ್ಲ. ಯಾವ ಕಂಟಕವಿಲ್ಲ. ವಿಶ್ವದ ವಿಶಿಷ್ಟಾಚಾರ ಸಿದ್ಧಿಗಾಗಿ, ಅನಿಷ್ಟಾಚಾರ ನಿರಸನಕ್ಕಾಗಿ, ಜೀವನಕ್ಕೆ ಬೇಕಾದ ಸಕಲಾರ್ಥ ಪ್ರಕಾಶಕ್ಕಾಗಿ ರೇಣುಕ ಗೀತೆಯ ಅವತರಣ! ಇದರದು ಶೈವೀ (ಮಂಗಲಕರ) ವಾಸನೆ; ಶೈವೀ ರಸರುಚಿ; ಶೈವೀ ರೂಪರೇಷೆ; ಶೈವೀ ಸ್ಪರ್ಶ ಮತ್ತು ಶಬ್ದ; ಶೈವೀ ಭಾವಾ ನುಭವ ! ಇದರದು ಶಿವಾದ್ವೈತ ಭಾವ ಪ್ರಸಾದ! ಪರಮ ಪರಿಣಾಮ; ಮತ್ತು ಪರಿಸ್ಫೂರ್ತಿ !!

ಇದನ್ನು (ರೇಣುಕ ಗೀತೆಯನ್ನು) ರೂಪಿಸಿದ ಶಿವಕವಿ ಶಿವಾನುಭಾವಿ ಶಿವಯೋಗಿ ಶಿವಾಚಾರ್ಯನು ಧರ್ಮಮಾರ್ಗ ಪ್ರವರ್ತಕ; ಶಿವತತ್ತ್ವ ಪರಿಜ್ಞಾನ ಪೂರ್ಣಚಂದ್ರ; ಸನಾತನ ಶಿವಭಕ್ತಿ ರಕ್ಷಕ; ಅಪಸಿದ್ಧಾಂತ ಮಹಾಧ್ವಾಂತ ನಿವಾರಕ, ಚಿದಾನಂದ ಪರಾಕಾಶ ಶಿವಾನುಭವ ಮಹಾಯೋಗಿ, ಪರಿಪಕ್ವ ಸ್ವಯಾನುಭವ ಪುಷ್ಪ ಪರಿಮಳ ದಿಗಂತ ವಾಸಿತ! ಅಂತೆಯೇ ಆತನ ಆಕೀರ್ತಿ ದಿಗಂತ ವಿಶ್ರುತ!! "ಅನುಗ್ರಹಾಯ ಲೋಕಾನಾಮಭ್ಯಧಾತ್

ಸುಧಿಯನಾಂ ವರ:" ಅಂತೆಯೇ ವಿಶ್ವಾನುಗ್ರಹಕಾರಕವಾದ "ಸಿದ್ಧಾಂತ ಶಿಖಾಮಣಿ" ಎಂಬ ಹೆಸರಿನ ಹೆಗ್ಗಳಿಕೆಯ ಕಳಾಕೃತಿಯನ್ನು ಲೋಕದ ಮಾನವರ ಕಲ್ಯಾಣಕ್ಕಾಗಿ ಸೃಷ್ಟಿಸಿರುವನು.

"ತದಂಶಾ ಜೀವನಾಮಕಾ:" ಮಾನವರು ಮಾತ್ರವಲ್ಲ, ಜೊತೆಗೆ ಜಾಗತಿಕ ಜೀವರೆಲ್ಲರೂ ಪರಮಾತ್ಮನಾದ ಶಿವಾಂಶಕರು. ಜೀವಕೋಟಿಯ ಸಮದರ್ಶಿತ್ವಕ್ಕೆ ಈ ಸೂಳ್ನುಡಿ ಹಿಡಿದ ನಿಲುಗನ್ನಡಿಯಾಗಿದೆ. ನೀರಿನಿಂದಾದ ತೆರೆಗಳೆಲ್ಲವೂ ನೀರೇ ಆಗಿರುವಂತೆ ಶಿವಶಕ್ತಿ ತತ್ತ್ವದಿಂದಾದ ಜಗತ್ತು ಶಿವ ಶಕ್ತಿ ಸ್ವರೂಪವೇ ಆಗಿದೆ. ಆತ್ಮಶಕ್ತಿ ವಿಕಾಸದಿಂದ ಪ್ರತಿಯೊಬ್ಬನು ವಿಶ್ವಾತ್ಮನಾಗುತ್ತಾನೆ; ಆಗುವ ಶಕ್ತಿ ಸಂಪನ್ನನಾಗಿದ್ದಾನೆ. 'ಶಿವಾತ್ಮಕಂ ವಿಶ್ವಮಿದಂ' ಇದು ರೇಣುಕಗೀತೆಯ ವಿಶ್ವ ಸಂದೇಶ ! ಅಂತೆಯೇ ಹಸ್ತ ಪೀಠದಲ್ಲಿಟ್ಟು ಪೂಜಿಸುವ ಲಿಂಗ "ಶಿವಶಕ್ತಿ ಸಮಾಯೋಗಂ ವಿಶ್ವಂ ಲಿಂಗಂ ತಮುಚ್ಯತೇ" ಬೇರೆ ಏನೂ ಅಲ್ಲ; ಶಿವಶಕ್ತಿ ಸಮಾಯೋಗವುಳ್ಳ ವಿಶ್ವಲಿಂಗ! ಇದನ್ನು ಯಾರಾದರೂ ಆರಾಧಿಸಬಹುದು-ಗುರುಕಾರುಣ್ಯ ಕೈಕೊಳಗಾಗಿ! ಜಾತಿ ಕುಲ ಪಂಥಗಳ ಮಾತಿಲ್ಲಿ ಬೇಕಿಲ್ಲ.

"ಶಿವಭಕ್ತಿ ಸಮಾವೇಶೇ ಕ್ವ ಜಾತಿಪರಿಕಲ್ಪನಾ ? ।
ಇಂಧನೇಷ್ವಗ್ನಿದಗ್ಧೇಷು ಕೋವಾ ಭೇದ: ಪ್ರಕೀರ್ತ್ಯತೇ ? ॥"
— ರೇಣುಕಗೀತೆ

ಗುರುಲಿಂಗ ಭಕ್ತಿಯಲ್ಲಿ ಯಾವ ಜಾತಿಕಲ್ಪನೆಯಿರದು; ಇರುವುದಿಲ್ಲ. ಗುರುದತ್ತದೀಕ್ಷಾಗ್ನಿಯಿಂದ ಎಲ್ಲ ಕುಲಜಾತಿಗಳು ಸುಟ್ಟು ಹೋಗುತ್ತವೆ. ಅಗ್ನಿಯಲ್ಲಿ ಸುಟ್ಟ ನಾನಾಜಾತಿಯ ಕಾಷ್ಠಗಳೆಲ್ಲ ಒಂದೇ ಬಗೆಯ ಕೆಂಡವಾಗುವಂತೆ ಆಗುತ್ತವೆ. ಗುರೂಪದೇಶ ಪಡೆದ ಲಿಂಗ ಯೋಗಿಯು, "ಸಮವೃತ್ತಿರ್ಭವೇದ್ಯೋಗೀ ಭಿಕ್ಷುಕೇ ವಾ ನೃಪೇಥವಾ" ಎಂದು ಸಾರಿದೆ ರೇಣುಕಗೀತೆ! ಸಮದರ್ಶನ ಹೇಳಿದ ಗೀತೆಗಳಿವೆ; ಆದರೆ ಸಮವರ್ತನ ಹೇಳಿದ ಗೀತೆ ಇದೊಂದೆ ರೇಣುಕಗೀತೆ! "...ಶಿವಾದ್ವೈತೀ ಸರ್ವತ್ರಸಮವೃತ್ತಿಮಾನ್" ರವಿಯು ಎಲ್ಲರಿಗೂ ಬೆಳಕನ್ನಿತ್ತು ಎಲ್ಲರನ್ನು

ಕೆಲಸಕ್ಕೆ ಹಚ್ಚುವಂತೆ, ಲಿಂಗಯೋಗಿಯು (ಶಿವಾದ್ವೈತಿಯು) ಎಲ್ಲರಲ್ಲಿಯೂ ಚಿತ್ಕಳೆಯನ್ನಿತ್ತು ಸಮವೃತ್ತಿಯುಳ್ಳವರನ್ನಾಗಿಸುತ್ತಾನೆ. ಅಂತಯೆ ಶಿವಾಚಾರ್ಯನು ಸಮದರ್ಶಿಯಾದಂತೆ ಸಮವೃತ್ತಿಯುಳ್ಳವನೂ ಆಗಿರುತ್ತಾನೆ. ಇದರಿಂದಾಗಿ ವಿಶ್ವದವರೆಲ್ಲರ ಉದ್ಧಾರಕ್ಕೆ ಪಾತ್ರನಾಗುತ್ತಾನೆ. ವಿಶ್ವೋದ್ಧಾರವೇ ಆತನ ಮಹಾಮಣಿಹ. ಅದನ್ನು ಸಾರುತ್ತದೆ ಶಿವಯೋಗಿ ಶಿವಾಚಾರ್ಯರ ರೇಣುಕಗೀತೆ!

ಇಷ್ಟೊಂದು ವಿಶಾಲಮನೋಭಾವವುಳ್ಳ ರೇಣುಕಗೀತೆಯು ವಿಶ್ವ ಸಂದೇಶವನ್ನಿತ್ತವನು ಶ್ರೀ ಶಿವಯೋಗಿ ಶಿವಾಚಾರ್ಯನು. ಈತನು ಕನ್ನಡಿಗನು. ಅದರಲ್ಲಿಯೂ ವಿಜಾಪುರ ಜಿಲ್ಲೆಯ ಸಾಲೋಟಗಿ ಗ್ರಾಮಸ್ಥನು. ದಕ್ಷಿಣದ ತಕ್ಷಶಿಲಾ ಎಂದು ಹೆಸರಾಂತ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸಿ ದಾಕ್ಷಿಣಾತ್ಯರಿಗೆ ಶಿಕ್ಷಣವಲ್ಲಿ ಕೀರ್ತಿ ತಂದವನು. ಎಂಟನೆಯ ಶತಮಾನದವನು ಇಂತಹ ಆ ಮಹಾನುಭಾವನನ್ನು ಇಲ್ಲಿಯ ವರೆಗೆ ಮರೆತಂತೆ ಇನ್ನು ಮುಂದೆ ಮರೆತು ಅಂಧಕಾರದಲ್ಲಿರದೆ ಆತನ ಆರಾಧನೆಯನ್ನು ಮಾಡಿ ಶಿವಶಕ್ತಿ ಸಂಪನ್ನ ವಿಶ್ವಪ್ರೇಮವನ್ನು ಬೆಳೆಸಿ ವಿಶ್ವೈಕ್ಯ ಮನೋಭಾವದವರಾಗಿ ವಿಶ್ವ ವಿಶಾಲವಾಗಿ ಬಾಳಿ ಬೆಳಗೋಣ ಬೆಳಗಿ ಬದುಕೋಣ! ಎನೆಲ್ಲ ಭೇದ-ಭಾವಗಳನ್ನು ತ್ಯಜಿಸೋಣ !

ವಿಶ್ವೈಕ್ಯಭಾವೋದ್ದೀಪನಗೊಳಿಸಿ ವಿಶ್ವಸಿದ್ಧಿಯನ್ನುಂಟು ಮಾಡುವುದೇ ರೇಣುಕಗೀತೆಯ ಧ್ಯೇಯ. ವಿಶ್ವವನ್ನೊಳಗೊಂಡ ಕ್ರಿಯಾ (ಇಷ್ಟ) ಲಿಂಗಧಾರಣವಲ್ಲಿ ಈ ಧ್ಯೇಯ ದೀಪ್ತವಾಗಿದೆ ಧ್ವನಿಯುಳ್ಳದಾಗಿದೆ. "ಲಿಂಗಂ ಸದ್ರೂಪತಾಪನ್ನಂ ಲಕ್ಷ್ಯತೇ ವಿಶ್ವಸಿದ್ಧಯೇ" ವಿಶ್ವಗುರು ಚಿದ್ರೂಪಲಿಂಗವನ್ನು ಸದ್ರೂಪಗೊಳಿಸಿ ಕರುಣಿಸುವುದರಲ್ಲಿ ವಿಶ್ವಸಿದ್ಧಿಯ ಲಕ್ಷ್ಯವೇ ಮುಖ್ಯವಾಗಿದೆ.

"ಅಖಂಡಂ ಯೇನ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು ।
ಆತ್ಮಯೋಗ ಪ್ರಭಾವೇನ ಸ ಗುರುರ್ವಿಶ್ವಭಾಸಕಃ ॥

ಷಡಧ್ವಾತೀತಯೋಗೇನ ಯತತೇ ಯಸ್ತು ದೇಶಿಕಃ।
ಮಾಯಾಬ್ಧಿತರಣೋಪಾಯಹೇತುರ್ವಿಶ್ವಗುರು ಸ್ಮೃತಃ॥
ಗುರೋರ್ವಿಜ್ಞಾನಯೋಗೇನ ಕ್ರಿಯಾ ಯತ್ರ ವಿಲೀಯತೇ ।
ತತ್ಕ್ರಿಯಾಲಿಂಗಮಾಖ್ಯಾತಂ ಸರ್ವೈರಾಗಮಪಾರಗೈಃ॥
ನಿರಸ್ತವಿಶ್ವಸಂಭೇದಂ ನಿರ್ವಿಕಾರಂ ಚಿದಂಬರಂ ।
ಸಾಕ್ಷಾತ್ಕರೋತಿ ಯೋ ಯುಕ್ತ್ಯಾ ಸ ವಿಶ್ವಗುರುರುಚ್ಯತೇ॥
ಪೂರ್ವಪಕ್ಷಂ ಸಮಾದಾಯ ಜಗದ್ಭೇದವಿಕಲ್ಪನಂ ।
ಅದ್ವೈತಕೃತಸಿದ್ಧಾಂತೋ ಗುರುರೇಷಗುಣಾಧಿಕಃ ॥" –ರೇ. ಗೀತ

ವಿಶ್ವಮಯ–ಮಂತ್ರಮಯ ಈ ಪಂಚಶ್ಲೋಕಗಳಲ್ಲಿ ವಿಶ್ವೈಕ್ಯಭಾವ, ವಿಶ್ವಸಿದ್ಧಿ, ವಿಶ್ವಚೈತನ್ಯ ಪ್ರಾಪ್ತಿಗಳು ವಿಸ್ಫುಟವಾಗಿ ನಿರೂಪಿತವಾಗಿವೆ. ಆತ್ಮಯೋಗ, ಷಡಧ್ವಾತೀತಯೋಗ, ವಿಜ್ಞಾನಯೋಗವುಳ್ಳವನೇ ವಿಶ್ವ ಭಾಸಕನಾದ ವಿಶ್ವಗುರು, ವಿಶ್ವಮಾನವೋದ್ಧಾರ ಗುರು. ಇದನ್ನು ಗಂಭೀರ ವಾಗಿ ನಿರೂಪಿಸುವುದೇ ರೇಣುಕ ಗೀತೆಯ ಉದಾತ್ತ ಉದ್ದೇಶ.



# ಶಿವಾನುಭವಸಿಂಧು ಸುಧಾಕರ, ಶಿವಯೋಗಿ ಶಿವಾಚಾರ್ಯ !

ಶಿವಯೋಗಿ ಶಿವಾಚಾರ್ಯರು ಬರೀ ಕವಿಯಲ್ಲ, ಶಿವಕವಿ. ಬರೀ ಅನು ಭವಿಯಲ್ಲ, ಶಿವಾನುಭವಿ; ಬರೀ ಶಿವಾನುಭವಿಯಲ್ಲ; ಶಿವಾನುಭವ ಯೋಗಿ ! ಬರೀ ಶಿವಾನುಭವಯೋಗಿಯಲ್ಲ, ಶಿವಾನುಭವಯೋಗ ಸಿಂಧು ಸುಧಾಕರ !!

"ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ॥"

ಶಿ. ಶಿವಾಚಾರ್ಯರ ತಂದೆ ಸಿದ್ಧನಾಥ ಶಿವಾಚಾರ್ಯ; ಆತನು ವೀರಶಿವಾ ಚಾರ್ಯ ಶಿಖಾರತ್ನನು. ಇಷ್ಟೇಅಲ್ಲ. ಶಿವಸಿದ್ಧಾಂತ ನಿರ್ಣೇತನು; ವೀರಶೈವ ಶಿಖಾರತ್ನನು; ವಿಶಿಷ್ಟಾಚಾರ ಶ್ರೀಮಂತನು; ಶಿವಜ್ಞಾನ ಮಹಾಸಾಗರನು. ಅಂತೆಯೇ ಶಾಂತನು, ಶಿವಾತ್ಮಕನು. ಸಂತರ ಆಚಾರ ಮಾತೃಕೆಯಾಗಿ ಶಿವಾಚಾರ್ಯ ಕುಲದಲ್ಲಿ ಜನಿಸಿದ ಶಿವಭಕ್ತಿಯನ್ನು ವಿಗತವಿಪ್ಲವವನ್ನಾಗಿಸಿ ದಾತನು. ಅಂದರೆ ವಿಪ್ಲವ ವಿರಹಿತವನ್ನಾಗಿಸಿದಾತನು ಆದೆಂತಹ ಪ್ರತಿಭಾ ಶಾಲಿ ಆತನ ಆ ತಂದೆ ! ಒಂದೊಂದು ವಿಶ್ಲೇಷಣವೂ ಒಂದೊಂದು ವಿಶಿಷ್ಟ ಪ್ರಭಾವಪೂರ್ಣವಾಗಿವೆ. ಇವುಗಳಲ್ಲಿ ಒಂದೊಂದನ್ನೆ ಸಾಧಿಸುವುದು ಜೀವನದಲ್ಲಿ ಕಷ್ಟ ಸಾಧ್ಯ. ಆದರೆ ಆ ಅಸಾಮಾನ್ಯವಾದ ಎಳೆಂಟು ಪ್ರಬುದ್ಧ ಸತ್ ಸಾಧನಗಳಲ್ಲಿ ಸಿದ್ಧಿಯನ್ನು ಪಡೆದು ಪ್ರಸಿದ್ಧನಾಗಿರು ವುದು ಸಾಮಾನ್ಯವಾದ ಸೊಲ್ಲಲ್ಲ. ಇಲ್ಲಿ ಉಕ್ತವಾಗಿರುವವು ಒಂದೂ ಕಪೋಲ ಕಲ್ಪಿತವಾದವುಗಳಲ್ಲ ಆತನ ಕುಮಾರನು ಕಂಡು ಕಾಣಿಸಿದ ಸತ್ಯಾಂಶಗಳು.

ಶ್ರೀ ಸಿದ್ಧನಾಥ ಶಿವಾಚಾರ್ಯನು ಕೇವಲ ಶಿವಾಚಾರ್ಯ ಶಿಖಾರತ್ನನಲ್ಲ. ವೀರರಾದ ಶಿವಾಚಾರ್ಯರ ಶಿಖಾರತ್ನನಾಗಿದ್ದನು. ವೀರಪದದರ್ಥ ವಿಶಿಷ್ಟ ವ್ಯಾಪ್ತಿಯುಳ್ಳದು. ಅಂದು ವಿಜಿತೇಂದ್ರಿಯ ವೀರರಿದ್ದರು. ಅವರಿಗೆ ಶಿರೋಮಣಿಯಾಗಿದ್ದನು ಸಿದ್ಧನಾಥ ಶಿವಾಚಾರ್ಯನು. ಅಂದು ಶಿವಾಚಾರ್ಯರ ಸಂತತಿ ಅಮಿತವಾಗಿತ್ತು. ಶಿವಾಚಾರದಲ್ಲಿ ವೀರರಾಗಿದ್ದರು; ಅವರಿಗೆಲ್ಲ ಶಿಖಾರತ್ನನಾದ ಸಿದ್ಧನಾಥ ಶಿವಾಚಾರ್ಯನು ಶಿವಸಿದ್ಧಾಂತದಲ್ಲಿ ಸಂಪೂರ್ಣ ಸ್ವಾನುಭಾವಿಯಾಗಿ ಒಂದು ನಿರ್ಣಯದ ನಿಲವನ್ನು ತಂದಿದ್ದನು. ಆದರಿಂದ ಅಂದೆ ವೀರಶೈವ ಸಿದ್ಧಾಂತಕ್ಕೆ ಮಹಾಂತ ಸಾಮರ್ಥ್ಯವೊದಗಿದ್ದಿತು- ಶಿವಾತ್ಮಕ ಶಿವಾಚಾರ್ಯ ಸಿದ್ಧನಾಥನಿಂದ! ಅಲ್ಲದೆ ಆತನು ವಿಶಿಷ್ಟಾಚಾರ ಮತ್ತು ವಿಶಿಷ್ಟ ಶಿವ ವಿಚಾರಗಳಿಂದ ಶ್ರೀಮಂತನಾಗಿ ಅಂದಿನ ವೀರಶೈವರಿಗೆಲ್ಲ ಶಿಖಾರತ್ನನಾಗಿ ವಿಖ್ಯಾತನಾಗಿದ್ದನು. ಆಚಾರ ಮಾತೃಕೆಯಾಗಿ ಆಚಾರ್ಯ ಕುಲದಲ್ಲಿ ಆವಿಷ್ಕಾರವಾದ ಶಿವಭಕ್ತಿಯನ್ನು ಸುರಕ್ಷಿತಗೊಳಿಸಿದ ಕೀರ್ತಿ ಶ್ರೀ ಸಿದ್ಧನಾಥ ಶಿವಾಚಾರ್ಯನದು. ಹೀಗೇ ಶಿವಾಚಾರ-ಶಿವವಿಚಾರಗಳಿಂದೊಡಗೂಡಿದ ಸಿದ್ಧನಾಥನ ಶಿವಸಿದ್ಧಾಂತವೆಂಬ ಸಿಂಧುವಿಗೆ ಸುಧಾಕರನಾಗಿ ಜನಿಸಿದನು ಶಿವಯೋಗಿ ಶಿವಾಚಾರ್ಯನು. ಜನಿಸಿ ಶಿವಾಚಾರ-ಶಿವವಿಚಾರಗಳಲ್ಲಿ ತಂದೆಗಿಂತ ಮುಂದುವರಿದು 'ಚಿದಾನಂದ ಪರಾಕಾಶ ಶಿವಾನುಭವಯೋಗ' ವನ್ನು ಸಂಪಾದಿಸಿದ ಸಾಧನ ಸರ್ವೋನ್ನತ ಸರ್ವತ್ರ ಪರಿಪ್ಲುತ. ಶಿವಯೋಗಿ ಶಿವಾಚಾರ್ಯನ ಶಿವಾಗಮ ಪರಿಜ್ಞಾನ ಪರಿಪಕ್ವತೆ ಪರಾಕಾಷ್ಠವಾದುದು; ದಿಗಂತನಿಷ್ಠವಾದುದು. ಶಿವತತ್ತ್ವ ಪರಿಜ್ಞಾನವೆಂಬ ಚಂದ್ರಿಕೆಗೆ ಚಂದ್ರಮನಂತಿದ್ದನು. ಅಂತೆಯೇ ಸಕಲರಿಗೆ ಸಕಲಾರ್ಥ ಪ್ರಕಾಶಕವಾದ 'ಸಿದ್ಧಾಂತ ಶಿಖಾಮಣಿ' ಎಂಬ ಚಿಚ್ಚಿಂತಾರತ್ನವನ್ನು ರೂಪಿಸಿರುವನು. ಸರ್ವೋನ್ನತ 'ಚಿದಾನಂದ ಪರಾಕಾಶ ಶಿವಾನುಭವಯೋಗ'ವೆಂಬ ಸಿಂಧು ಸುಧಾಕರನಾಗಿರುವನು. ಇವನಿಂದ ಶಿವಾನುಭವವು ಆ ಪರಾಕಾಶಕ್ಕೆ ಉಕ್ಕೇರಿತು. ಚಿದಾನಂದ ಪ್ರದಾಯಕವಾಗಿ ಪರಿಶೋಭಿಸುತ್ತಿರುವುದು. ಈತನ ಸ್ವಾನುಭವ ಸಿದ್ಧಾಂತ ಮಹತೋ ಮಹಂತ ! ಅನುಭವಿಗಳಿಗೆಲ್ಲ ಅಪೂರ್ವವೂ ಆದರ್ಶವೂ ಆಗಿದೆ. ಅಂತಹ ಮಹಂತಾನುಭವದ ಆಕರ ಸಿದ್ಧಾಂತ ಶಿಖಾಮಣಿ. ಅದು

ಶ್ರೀ ಗೋಪ್ಯ ಚಿಂತಾಮಣಿ ! ಆ ಚಿಂತಾಮಣಿಯನ್ನು ಕರುಣಿಸಿದ ಚಿದಾ
ನಂದ ಪರಾಕಾಶ ಶಿವಾನುಭವಯೋಗಿ ಶಿವಯೋಗಿ ಶಿವಾಚಾರ್ಯರ ಷಟ್
ಸ್ಥಲಾನುಭವ ಮಾನವ ಜನಾಂಗದ ಜೀವನ ವಿಕಾಸ ಸೂತ್ರ; ಪ್ರಕಾಶ
ಪಾತ್ರ. ಆತನ ಆ ಅನುಭವ ಅಂಬುಧಿ ಮಾತ್ರವಲ್ಲ; ಅಂಬರ. ಅಂಬರ
ಮಾತ್ರವಲ್ಲ, ಅಂಬರಕ್ಕೆ ಅಂಬರವಾದ ಚಿದಂಬರ, ಆ ಚಿದಂಬರವನ್ನೆ ಪರಾ
ಕಾಶವೆಂದು ಹೇಳಲಾಗಿದೆ. ಆ ಪರಾಕಾಶವೇ ಪರಮಪ್ರಕಾಶ. ಆ ಬೆಳಗಿ
ನಿಂದ ಈ ಜಗತ್ತು ಬೆಳಗುತ್ತಿದೆ; ಸೊಗಸುತ್ತಿದೆ. ಅನುಭಾವಿಕ ಆ ಪರಾ
ಕಾಶವೆ ಶ್ರೀ ಶಿವಯೋಗಿ ಶಿವಾಚಾರ್ಯ. ಆ ಪರಾಕಾಶಚಿಚ್ಚಂದ್ರ.



# ಶಿವಾಚಾರ್ಯರಿಂದ ಸರ್ವಶ್ರೇಷ್ಟವಾದ ವಿಜಾ(ಜಯ)ಪುರ !

ವಿಜಯಪುರ-ವಿಜಾಪುರ, ಬಿಜ್ಜಪುರ-ಬಿಜಾಪುರ ಎಂದು ಅರ್ಥಾನರ್ಥಗಳಿಂದ ಕೂಡಿ ರೂಢಿವೆತ್ತ ವಿಜಾಪುರದ ವಿಶಿಷ್ಟಕೀರ್ತಿ ೧೨ನೆಯ ಶತಮಾನದಿಂದೀಚಿನದಲ್ಲ; ೧ನೆಯ ಶತಮಾನದಿಂದ ಮೊದಲಾದುದು. ಈಚೆಗೆ ಹೇಳುತ್ತಿರುವಂತೆ ಏಕಪಕ್ಷೀಯ ಶಿವಶರಣರಿಂದ ಮಾತ್ರವಲ್ಲ; ಶಿವಾಚಾರ್ಯರಿಂದಲೂ ವಿಶಿಷ್ಟಕೀರ್ತಿಗೆ ಪಾತ್ರವಾಗಿದೆ. ಭಕ್ತಿ ಭಂಡಾರಿ ಬಸವಣ್ಣನವರಿಗಿಂತ ಪೂರ್ವದಲ್ಲಿದ್ದ ಸಿದ್ಧನಾಥ ಶಿವಾಚಾರ್ಯ, ಶಿವಯೋಗಿ ಶಿವಾಚಾರ್ಯ, ರೇವಣಸಿದ್ಧ ಶಿವಾಚಾರ್ಯ, ಜಾತವೇದ ಮುನಿ ಶಿವಾಚಾರ್ಯ, ನಿಜಗುಣ ಶಿವಾಚಾರ್ಯರಿಂದ ಮತ್ತು ತರುವಾಯದಲ್ಲಿದ್ದ ಕರಿಬಸವ ಶಿವಾಚಾರ್ಯ ಮೊಗ್ಗೆಯ ಮಾಯಿದೇವ ಶಿವಾಚಾರ್ಯರಿಂದ ಸುಪ್ರಸಿದ್ಧವಾಗಿತ್ತೆಂದು-ಆಗಿದೆಯೆಂದು ಹೇಳಿದರೆ ತೆಗೆದು ಹಾಕುವ ಮಾತಲ್ಲ. ಪ್ರತಿಯಾಗಿ ಹರುಷ-ಹೆಮ್ಮೆಗಳು ಹೆಗ್ಗಡಲಂತೆ ಉಕ್ಕಿ ಬರುವ ಮಾತಾಗಿದೆ. ವಿಜಾಪುರ ಜಿಲ್ಲೆ ಶಿವಾಚಾರ್ಯರ ಮಹಾಮಣಿಹಗಳ ಆಡಂಬೊಲಾಗಿದೆ.

ಬಹುಮುಖದ ವ್ಯಕ್ತಿತ್ವವುಳ್ಳ ಸಿದ್ಧನಾಥ ಶಿವಾಚಾರ್ಯನು ಅದ್ವಿತೀಯ ವ್ಯಕ್ತಿ ! ಆತನದು ಅಸಾಧಾರಣ ಶಕ್ತಿ ! ಅಂತೆಯೇ ರೇವಣಸಿದ್ಧರದು ಅನನ್ಯ ಸಾಧಾರಣ ಕಾಯಕ ಕಳಾದೀಪ್ತಿ ! ಅವರಂತೆ ಕಾಯಕ ಮಾಡುವವರು ವೀರಶೈವೇತಿಹಾಸದಲ್ಲಿ ಬೇರೊಬ್ಬರಿಲ್ಲ. ಕೂಡಲ ಸಂಗಮದಲ್ಲಿ ಗುರುಕುಲ-ಅರ್ಚನ ಮಂಟಪಗಳ ಕಟ್ಟಿ ಬಸವಣ್ಣನಂತಹ ವ್ಯಕ್ತಿಯನ್ನು ರೂಪಿಸಿದ ಜಾತವೇದ ಮುನಿ ಶಿವಾಚಾರ್ಯರ ಸ್ಥಾನ ಮಾನಗಳು ಸಣ್ಣವೇನಲ್ಲ ತಮ್ಮ ಕಾರುಣ್ಯ ಸಂಸ್ಕಾರದಿಂದ ಇಡೀ ವಿಜಾಪುರ ಜಿಲ್ಲೆಯ ವೀರಶೈವರ

ಸಂಖ್ಯೆಯನ್ನು ಸರಿಮಿಗಿಲಿಲ್ಲದೆ ಹೆಚ್ಚಿಸಿದ, ಹೆಚ್ಚು ಜನಪ್ರಿಯರಾದ 'ನೀಡು ಮಾಮಿಡಿ'ಯ ಲೀಲೆಗೆ ಕಾರಣರಾದ ಕರಿಬಸವೇಂದ್ರರ ಕೀರ್ತಿ ದಿಗಂತ ವಿಶ್ರಾಂತವಾಗಿದೆ.

'ಶಿವಾನುಭವ ಸೂತ್ರ' 'ವಿಶೇಷಾರ್ಥ ಪ್ರಕಾಶಿಕೆ' 'ಶತಕತ್ರಯ' ಗ್ರಂಥಗಳನ್ನು ಬರೆದ ವೀರಶೈವರ ಘನತೆ ಗೌರವಗಳಿಗೆ ಪಾತ್ರರಾದ ಮಗ್ಗೆಯ ಮಾಯಿದೇವ ಶಿವಾಚಾರ್ಯರ ಹೆಗ್ಗಳಿಕೆ ಹೆಗ್ಗಡಲ ಆಳದಷ್ಟಿದೆ. ಇದೆಲ್ಲ ಇರಲಿ, ಈಗ ಪ್ರಸ್ತುತ ಪ್ರಸ್ತಾಪಿಸಬೇಕಾದ ಶಿವಯೋಗಿ ಶಿವಾಚಾರ್ಯರ ಸರ್ವೋನ್ನತ ಸಚ್ಚಾರಿತ್ರ–ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಸಿದ್ಧಾಂತಸಾಹಿತ್ಯಕ, ಕ್ರಾಂತಿಕಾರಕ ಮುಂತಾದ ಕ್ಷೇತ್ರಗಳಲ್ಲಿ ಪ್ರಶಸ್ತವಾಗಿದೆ, ಪ್ರಬುದ್ಧವಾಗಿದೆ; ಪ್ರಶಂಸಾರ್ಹವಾಗಿದೆ.

### ವಿಶ್ವವಿದ್ಯಾಕೇಂದ್ರ, ಸಾಲೋಟಗಿ !

ನಾಡಿನ ವಿದ್ಯಾಕೇಂದ್ರಗಳಲ್ಲಿ ಪ್ರಥಮ ಮತ್ತು ಪ್ರಖ್ಯಾತ ಕೇಂದ್ರ ಶಿವಯೋಗಿ ಶಿವಾಚಾರ್ಯರು ಸಾಲೋಟಗಿಯಲ್ಲಿ ರಚಿಸಿದ ಎಂಟನೆಯ ಶತಮಾನದ ವಿದ್ಯಾಕೇಂದ್ರ. ಇದನ್ನು ಶಿ. ಶಿವಾಚಾರ್ಯರು ಗಮನಾರ್ಹವಾಗಿ ಅಭಿವೃದ್ಧಿಗೆ ತರುವರು. ಅದರಲ್ಲಿ ಆಯ್ದುನೂರು ಪಂಡಿತರಿದ್ದರು. ಅವರಿಗೆಲ್ಲ ಅಗ್ರಮಾನ್ಯರು ಶಿವಯೋಗಿಶಿವಾಚಾರ್ಯರು. 'ದಕ್ಷಿಣದ ತಕ್ಷಶಿಲಾ' ಎಂದೆನ್ನಿಸಿಕೊಳ್ಳುವಷ್ಟು ಅಭಿವೃದ್ಧಿಗೆ ತರುವರು. ದಾಕ್ಷಿಣಾತ್ಯರಿಗೆ ಕೀರ್ತಿ ತಂದರು. ಸಾಲೋಟಗಿ ಐತಿಹಾಸಿಕ ನಗರವಾಗಿ ಶೈಕ್ಷಣಿಕ ಕೇಂದ್ರವಾಗಿ, ಶಿವಾದ್ವೈತ ಸೈದ್ಧಾಂತಿಕಜನ್ಮಭೂಮಿಯಾಗಿ, ಶಿವಾನುಭವಯೋಗಿ ಶಿ. ಶಿವಾಚಾರ್ಯ ದಿವ್ಯಧಾಮವಾಗಿ ಬಿಜ್ಜ(ಬಿಜಾ)ಪುರ ನಾಮ ಸಾರ್ಥಕವಾಯಿತು, ಶಿವಯೋಗಿ ಶಿವಾಚಾರ್ಯರಂತೆ ಕೂಡಲ ಸಂಗಮದಲ್ಲಿ ಜಾತವೇದ ಮುನಿ ಶಿವಾಚಾರ್ಯರು 'ಗುರುಕುಲ'ವನ್ನು ಮೊಗ್ಗೆಯ ಮಾಯಿದೇವ ಶಿವಾಚಾರ್ಯರು ಐಹೊಳೆಯಲ್ಲಿ ಒಂದು ವಿದ್ಯಾಕೇಂದ್ರವನ್ನು ಸ್ಥಾಪಿಸಿ ವಿಜಾಪುರ ನಾಡಿಗೆ ಸಾಟಿಯಿಲ್ಲದ ಜಸವ ತಂದರು. ಶಾಂತಿ ಕೇಂದ್ರವನ್ನಾಗಿಸಿದರು ಬಿಜಾಪುರದ ಜನ ಈ ಅಮೂಲ್ಯವಾದ ಶಿವಾಚಾರ್ಯರ ಮಹಾಮಣಿಹಗಳನ್ನು

ಮರೆಯುವಂತಿಲ್ಲ. ಸಾಮಾನ್ಯವಾಗಿ ಸನಾತನ ಕಾಲದಿಂದಲೂ ಅಯ್ಯ; ಮಾಹೇಶ, ದೇಶಿಕ ಗಣ ಎಂಬ ಪರ್ಯಾಯ ನಾಮಗಳುಳ್ಳ ಶಿವಾಚಾರ್ಯರು ಸಾರ್ವಜನಿಕರಿಗೆ ವಿದ್ಯೆ ಆಚಾರ ವಿಚಾರಗಳನ್ನು ಕಲಿಸುತ್ತ ಉಳಿಸುತ್ತ ಬಂದಿರುವುದನ್ನು ಸಾಮಾಜಿಕರು ಮರೆಯುವಂತಿಲ್ಲ. ಇದಕ್ಕೆ ವಂಚಿತವಾಗಿಲ್ಲ ವಿಜಾಪುರ.



# ಶಿವಾಚಾರ ಪರಿಸ್ಫೂರ್ತಿ ಶಿವದರ್ಶನ ಸಂಪತ್ತಿ !

"ಶಂಭೋರೇಕತ್ವಭಾವೇನ ಸರ್ವತ್ರ ಸಮದರ್ಶನಃ ।
ಕುರ್ವನ್ನಪಿ ಮಹಾಕರ್ಮ ನ ತತ್ ಫಲಮವಾಪ್ನುಯಾತ್॥
ಸುಕೃತೀ ದುಷ್ಕೃತೀ ವಾಪಿ ಬ್ರಾಹ್ಮಣೋ ವಾಽಂತ್ಯಜೋಽಪಿ ವಾ।
ಶಿವೈಕಭಾವಯುಕ್ತಾನಾಂ ಸದೃಶೋ ಭವತಿಧ್ರುವಂ।" – ರೇ. ಗೀತೆ

ಶಿವಶಕ್ತಿ ಸಮುತ್ಪನ್ನವಾದ ಈ ವಿಶ್ವವು ಶಿವಮಯ. ಶಿವೈಕಭಾವದಿಂದಾಚರಿಸುವುದೇ ಶಿವಾಚಾರ. ಆಚಾರಗಳಲ್ಲಿ ಶಿವಾಚಾರವೇ ಸರ್ವೋತ್ತಮ. ಸರ್ವತ್ರಸಮದರ್ಶನವೇ ಶಿವಾಚಾರ. ಅಶಿವವರ್ತನವನ್ನು ಬಿಟ್ಟು ಶಿವವರ್ತನವನ್ನು ತೊಟ್ಟು ಎಲ್ಲೆಲ್ಲಿಯೂ ಶಿವದೃಷ್ಟಿ, ಶಿವಬುದ್ಧಿ, ಶಿವಭಾವಗಳನ್ನಿಟ್ಟುಕೊಂಡವನಿಗೆ ಕರ್ಮವಾಗಲಿ ಕರ್ಮಫಲವಾಗಲಿ ಇರವು. ಪಾಪಿಯೆ ಇರಲಿ,ಪುಣ್ಯಶಾಲಿಯೆ ಇರಲಿ; ಅಗ್ರಜನೆ ಇರಲಿ, ಅಂತ್ಯಜನೇ ಇರಲಿ ಯಾರೇ ಇರಲಿ ಅವರನ್ನೆಲ್ಲ ಶಿವಭಾವದಿಂದ ಕೂಡಿ,ಶಿವಸದೃಶವಾಗಿ ಕಂಡು ಇರವಾತನೆ ಶಿವಾಚಾರವಂತನು. ಆತನೆ ಶಿವಸ್ವರೂಪನು. ಆತನಿಗೆ ಜಡಕರ್ಮಗಳ ಸೂತಕಾದಿಗಳ ಸೋಂಕಿಲ್ಲ. ಶಿವಾಚಾರವುಳ್ಳವನಿಗೆ ಶಿವಾದ್ವೈತ ಪರಿಜ್ಞಾನವುಂಟಾಗಿ ಸ್ಥಿರವಾಗುತ್ತದೆ. ನಿರ್ಮಲ ಶಿವಜ್ಞಾನಾಗ್ನಿಯಲ್ಲಿ ಕರ್ಮಬೀಜ ದಗ್ಧವಾಗುತ್ತದೆ. ದೇಹವಿದ್ದರೂ ದೇಹಯಾತ್ರೆಯಿರದು. ಜಡದೇಹಿಗಳಂತೆ ಜೀವಿಸನು. ವರ್ಣಾಶ್ರಮ ವಿಭೇದ ವಿಚಾರಾಚಾರಗಳಿಗೊಳಗಾಗನು. ಭಿನ್ನಭಾವ ವಾಸ್ತವವಲ್ಲ. ಸರ್ವರೂ ಸರ್ವವೂ ಶಿವಸ್ವರೂಪ. ಶಿವಾಚಾರ ನಿರತನು ಮತ್ತು ಶಿವಾಚಾರ್ಯನು ಭವಿ, ಭಕ್ತ, ಶರಣ ಎಂಬ ಭೇದವನ್ನು ಕಲ್ಪಿಸನು.

"ಯದ್ಯತ್ಪಶ್ಯತಿ ಸಾಮೋದಂ ವಸ್ತು ಲೋಕೇಷು ದೇಶಿಕಃ।
ಶಿವದರ್ಶನ ಸಂಪತ್ತಿಸ್ತತ್ರ ತತ್ರ ಮಹಾತ್ಮನಃ॥
ಯತ್ಕಿಂಚಿದ್ಭಾಷಿತಂ ಲೋಕೇ ಸ್ವೇಚ್ಛಯಾ ಶಿವಯೋಗಿನಾ।
ಶಿವಸ್ತೋತ್ರಮಿದಂ ಸರ್ವಂ ಯಸ್ಮಾತ್ಸರ್ವಾತ್ಮಕಃ ಶಿವಃ॥
ಯದ್ಯಚ್ಚಿಂತಯತೇ ಯೋಗೀ ಮನಸಾ ಶುದ್ಧಭಾವನಃ।
ಶತ್ತಚ್ಛಿವಮಯಂತ್ವೇನ ಶಿವಧ್ಯಾನಮುದಾಹೃತಂ॥
ಯಾ ಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಂ।
ಸಾ ಸಾ ಪೂಜಾ ಮಹೇಶಸ್ಯ ಸರ್ವದಾ ತದ್ಗತಾತ್ಮನಾಂ॥" –ರೇ. ಗೀತೆ

ಶಿವದರ್ಶನ ಸಂಪತ್ತಿಗೆ ಶಿವಾಚಾರ ಪರಿಸ್ಫೂರ್ತಿಯೆ ಮುಖ್ಯಾಧಾರ. ಶಿವಾಚಾರ ನಿರತ ಶಿವಾಚಾರ್ಯನು ಮತ್ತು ಶಿವಾಚಾರದವನು ಶಿವಾಚಾರ ಪರಿಸ್ಫೂರ್ತಿಯಿಂದ ನೋಡಿದಲ್ಲೆಲ್ಲ ಶಿವದರ್ಶನ ಸಂಪತ್ತಿಯುಂಟಾಗುತ್ತದೆ. ಶಿವಾಚಾರ ಸಾಮಾನ್ಯ: ಶಿವಾಚಾರ ಪರಿಸ್ಫೂರ್ತಿ ಅಸಾಮಾನ್ಯ, ಸ್ಫೂರ್ತಿ-ಉತ್ಸುಕತೆ. ಪರಿಸ್ಫೂರ್ತಿ ಉತ್ಕಟವಾದ ಉತ್ಸುಕತೆ! ಶಿವಸಾಮರಸ್ಯಕ್ಕೆ ಇದು ಅತ್ಯಗತ್ಯ. ಶಿವದರ್ಶನ ಸಂಪತ್ತಿಗೆ ಕಾರಣನು ಶಿವಾಚಾರ್ಯನು. ಈತನು ಸ್ಥಲಗಳಿಂದ ಸೀಮಿತನಲ್ಲ; ಸರ್ವಸ್ಥಲೀ! ಈ ದಿಸೆಯಲ್ಲಿ ರೇಣುಕ ಗೀತಾವಾಣಿ ದೇಶಿಕ– ಮಹಾತ್ಮಾ ಎಂದು ನಿರ್ದೇಶಿಸಿದೆ–ಅರ್ಥವತ್ತಾಗಿ! ಈತನು ಆಡಿದ್ದು ಶಿವಸ್ತೋತ್ರ, ನೆನೆದದ್ದು ಶಿವಧ್ಯಾನ; ಹೆಚ್ಚೇನು ಮಾಡಿದ್ದೆಲ್ಲ ಶಿವಾರ್ಚನ,

ಇದು ಶಿವಾಚಾರದ ಸಾಧನೆ, ಸಿದ್ಧಿ. ಶಿವಾಚಾರ ಸಿದ್ಧಿಯಿಂದ ಈ ಜಾಗತಿಕ ಭೇದಜಾಲ ಇಲ್ಲದಾಗುತ್ತದೆ; ಭೇದಭಾವ ಬಯಲಾಗುತ್ತದೆ. ಆದರೆ ಲೋಕದ ಮಾನವರು ಸಾಮಾನ್ಯವಾಗಿ ಶಿವಾಚಾರಕ್ಕೆ ಒಗ್ಗರು; ಒಗ್ಗುತ್ತಿಲ್ಲ. ಮಾನವರೆಲ್ಲ ಒಂದೇ ಆದರೂ ಒಡಕಂ ಬಗೆ ಬೆಳೆದು ಬಂದಿದೆ. ಅಲ್ಲದೆ ಅನಾಚಾರ ಅತ್ಯಾಚಾರ ಭ್ರಷ್ಟಾಚಾರಗಳು ಬೆಳೆದು ಬರುತ್ತಿವೆ. ರುದ್ರ ಕುಲವೊಂದೆಯಾದರೂ ಛಿದ್ರ ವಿಚ್ಛಿದ್ರ ಮನೋವೃತ್ತಿ ಹೆಚ್ಚುತ್ತಿದೆ. ಭೇದ ಬಂಧನ ಅಶಿವಾಚರಣಗಳು ಮಿತಿಮೀರಿವೆ.

ನೆಲವೊಂದೆ ಜಲವೊಂದೆ ಬೆಳಗುವ ಬೆಳಗು ಒಂದೆ ಬೀಸುವ ಗಾಳಿ ಒಂದೆ, ಇರುವಿಕೆಗೆ ಅವಕಾಶವಿತ್ತ ಆಗಸವೊಂದೆ; ಚೇತನಿಸುವ ಚೇತನವೊಂದೆ! ಇಂತಿದ್ದು ನಾನಾಭೇದಗಳಿಗೆಡೆಯಾಗಿದೆ 'ವಿಶ್ವಂ ಶಿವಮಯಂ' ವಿಶ್ವವೆಲ್ಲ ಶಿವಮಯವಾಗಿದ್ದು ಅಶಿವಭಾವ ಅಶಿವಾಚಾರ ವಿಚಾರಗಳು ವೃದ್ಧಿಸುತ್ತಿವೆ.

"ಭೇದ ಬುದ್ಧಿ ಸಮುತ್ಪನ್ನ ಮಹಾಸಂಸಾರ ಸಾಗರಂ।
ಅದ್ವೈತಬುದ್ಧಿ ಪೋತೇನ ಸಮುತ್ತರತಿ ದೇಶಿಕ: ॥
ಶಿವಾದ್ವೈತ ಪರಿಜ್ಞಾನೇ ಸ್ಥಿರೇಸತಿ ಮನಸ್ವಿನಾಂ!
ಕರ್ಮಣಾ ಕಿಂ ನು ಭಾವ್ಯಂ ಸಾದಕೃತೇನ ಕೃತೇನ ವಾ॥" –ರೇ. ಗೀತೆ

ಭೇದಬುದ್ಧಿಯಿಂದ ಹುಟ್ಟಿದೆ ಈ ಮಹಾಸಂಸಾರ ಸಾಗರ! ಇದನ್ನು ದಾಟಿ ಆ ಅಭೇದ ತೀರಕ್ಕೆ 'ಸೇರುವುದು ಸರ್ವರಿಗೆ ಸಾಧ್ಯವಿಲ್ಲದಾಗಿದೆ. ದಾಟಿ ಸಬಲ್ಲ ದೇಶಿಕ (ಶಿವಾಚಾರ್ಯ)ನೊಬ್ಬ! ಆತನಲ್ಲಿ ಅಭೇದ ಬುದ್ಧಿಯೆಂಬ ನೌಕೆ ಯಿದೆ. ಅದುವೆ ಶಿವಾದ್ವೈತ ಪರಿಜ್ಞಾನ! ಅದನ್ನು ಶಿವಾಚಾರದಿಂದ ಸ್ಥಿರ ಗೊಳಿಸಿಕೊಂಡರೆ ಸಂಸಾರಸಾಗರದ ನಾನಾಭೇದ ನಾನಾ ಅಶಿವಾಚಾರಗಳೆಂಬ ಹೆದ್ದೆರೆಗಳಿಂದ ಏನೂ ಆಗದು. ಅನಾಯಾಸವಾಗಿ ಆತಂಕವಿಲ್ಲದೆ ದಾಟ ಬಹುದಾಗಿದೆ. ಶಿವಾದ್ವೈತಭಾವ ಅಂತಹದು. ಅದು ಪೂರ್ಣಾಖಂಡಾನಂತಾ ಸ್ವರೂಪದ್ದು. ಅದು ಶಿವಾಚಾರ್ಯನು ಭೋಧಿಸುವ ಶಿವಾಚಾರದಿಂದ ಶಿವಾ ಚಾರ ಪರಿಸ್ಫೂರ್ತಿಯಿಂದ ಲಭಿಸುವುದು.

ಇಲ್ಲಿ ಬಂದ ಬಳಿಕ ಬದುಕಬೇಕು. ಅಶಿವಾಚಾರಗಳಿಂದ ಬದುಕಿದರೆ ಅದು ಬದುಕಲ್ಲ; ಬಾಳಲ್ಲ. ಅದೊಂದು ನಿಕೃಷ್ಟವೃತ್ತಿ ಅದುಳ್ಳವ ನಡೆವೆಣ! ಕಾರಣ ಶಿವಾಚಾರದ ಶಿವಾದ್ವೈತದ ಶಿವ ಸೌಂದರ್ಯದಿಂದ ಬಾಳಬೇಕು ಶಿವಾನಂದ ಪರಿಸ್ಫೂರ್ತಿಸ್ವರೂಪ ಜೀವನ್ಮುಕ್ತಿಯಲ್ಲಿ ಜೀವಿಸಬೇಕು.

"ಶಿವವೇಧಕರೇ ಜ್ಞಾನೇ ದತ್ತೇ ಯೇನ ಸುನಿರ್ಮತೀ।
ಜೀವನ್ಮುಕ್ತೋ ಭವೇಚ್ಛಿಷ್ಯ: ಸ ಗುರುರ್ಜ್ಞಾನಸಾಗರ॥:" -ರೇ.ಗೀತೆ

ಇದನ್ನು ಕ್ರಿಯಾಶೀಲತೆಯಲ್ಲಿ ಬೋಧಿಸುವಾತನೆ ಶಿವಾಚಾರ್ಯ, ಶಿವಾಚಾರ್ಯ ಎಂಬೀ ಅನ್ವರ್ಥಕನಾಮ ಸದಾ ಪ್ರಗತಿಶೀಲ ಕ್ರಿಯಾಶೀಲ ಜ್ಞಾನಶೀಲ ಚೇತನಪ್ರತೀಕ! ಶಿವ ಸಂವೇದನವನ್ನುಂಟು ಮಾಡುವ ಕ್ರಿಯಾ ಚೇತನ, ಜ್ಞಾನಚೇತನ, ಭಾವಚೇತನಗಳನ್ನು ಸಾಮಾಜಿಕರಿಗೆ ಸರ್ವದಾ ಕರುಣಿಸಬಲ್ಲ ಶಿವಾಚಾರ್ಯವು ಇವನ್ನು ಪಡೆದ ಸಯ್ಪಿನ ಶಿಷ್ಯನು ಜೀವನ್ಮುಕ್ತ ನಾಗನೆ? ಶಿವಾಚಾರದ ಪರಿಸ್ಫೂರ್ತಿ ಪಡೆಯನೆ? ಶಿವದರ್ಶನ ಸಂಪತ್ತಿಯಿಂದ ಶ್ರೀಮಂತನಾಗನೆ?



# ಪಶುಪತಿಮತಸಾರ ವೀರಶೈವಧರ್ಮ; ಮತ್ತು 'ಶಿದ್ಧಾಂತ ಶಿಖಾಮಣಿ' ಗ್ರಂಥ!

"ಅನುಗತಸಕಲಾರ್ಥೇ ಶೈವತಂತ್ರೈ: ಸಮಸ್ತೈ:
ಪ್ರಕಟಿತ ಶಿವಬೋಧಾದ್ವೈತಭಾವಪ್ರಸಾದೇ ।
ವಿದಧತು ಮತಿಮಸ್ಮಿನ್ ವೀರಶೈವಾ (ವೇ) ವಿಶಿಷ್ಟಾ:
ಪಶುಪತಿಮತಸಾರೇ ಪಂಡಿತಶ್ಲಾಘನೀಯೇ ॥೩.೨॥

— ಸಿ. ಸಿಖಾಮಣಿ

ದ್ರಾವಿಡರು ಮೂಲ ಭಾರತೀಯ:ರು; ಅನಾದಿ ಕಾಲದವರು. ದ್ರಾವಿಡರಲ್ಲಿ ಭಿನ್ನ ಭಿನ್ನ ಪಂಗಡಗಳಿರಲಿಲ್ಲ. ಜೀವನಮಾರ್ಗ ಒಂದೇ ಇದ್ದಿತು. ರುದ್ರದೇವನು ದ್ರಾವಿಡರಲ್ಲಿ ಅತ್ಯಂತ ಪ್ರಮುಖನು, ಪ್ರಭಾವಾನ್ವಿತನು. ಯೋಗಿ, ವೈದ್ಯ, ಕವಿ, ಕೃಷಿಕನಾಗಿದ್ದನು; ಇವೆಲ್ಲದರಲ್ಲಿ ಭರತಖಂಡದ ಪ್ರಥಮಿಗನಾಗಿದ್ದನಲ್ಲದೆ ಇವುಗಳ ಸೃಜನಕರ್ತನಾಗಿದ್ದನು. ಅಂತೆಯೇ ಪಶುಪತಿಮತ (ಶಿವಾಚಾರ)ದ ಉತ್ಪಾದಕನೂ ಆಗಿದ್ದನು. ಅಷ್ಟಾಂಗ ಯೋಗವನ್ನು ಕಂಡು ಹಿಡಿದು ಧ್ಯಾನಾದಿಗಳಲ್ಲಿ ತುಂಬಾ ಬಲ್ಲಿದನಾಗಿ ಸಿದ್ಧಿ ಸಂಪನ್ನನಾಗಿದ್ದನು. ಧ್ಯಾನಯೋಗದಲ್ಲಿ ಮಂಡಿಸಿದ ಭಾವಚಿತ್ರ ಹರಪ್ಪ ಮೊಹೆಂಜೊದಾರೋ ನಗರಗಳಲ್ಲಿ ದೊರೆತಿದೆ.

ಶಿನೆಯುದಾಗಿ ವೈದ್ಯ ವಿದ್ಯೆಯಲ್ಲಿ ತುಂಬಾ ವಿದ್ವಾಂಸನು. ಸಾವಿರಾರು ಔಷಧಿಗಳನ್ನು ಕಂಡು ಹಿಡಿದಿದ್ದನು. ಇದಕ್ಕಾಗಿ ಬೆಟ್ಟ ಬೆಟ್ಟಗಳಲ್ಲಿ ನಿಡುಗಾಲ ಸುಳಿದಾಡುತ್ತಿದ್ದನು ಏನೆಲ್ಲ ಬೇನೆಗಳನ್ನು ಕಳೆವ ನಾರು ಬೇರು ಸೊಪ್ಪು ಕಾಯಿಗಳನ್ನು ಕಂಡುಕೊಂಡಿದ್ದನು. ಮುಪ್ಪು ಒಂದು ರೋಗವೆಂದು ತಿಳಿದು ಅದನ್ನು ತೊಡೆದು ಹಾಕುವ ಮದ್ದನ್ನು ಕಂಡು

ಪ್ರಯೋಗಿಸುತ್ತಿದ್ದನು. ತಾನು ತನ್ನ ರುದ್ರಗಣರು ಮುಪ್ಪಿಲ್ಲದೆ ತರುಣ ರಾಗಿಯೇ ಬಾಳಿದರು. ಇದರಿಂದ ರುದ್ರದೇವನ ವೈದ್ಯವಿದ್ಯೆಯ ಪಾರಮ್ಯ ವನ್ನು ಪ್ರೌಢಿಮಿತೆಯನ್ನು ಕಂಡುಕೊಳ್ಳಬಹುದಾಗಿದೆ. ಅಡವಿಗಳಲ್ಲಿ ನಿಡು ಗಾಲ ಔಷಧಿಗಳಿಗೆ ಓಡಾಡುವಾಗ ಸಾತ್ವಿಕ ಪ್ರಾಣಿಗಳಾದ ಕಾಡಾಕಳಗಳನ್ನು ಕಂಡು ಅವನ್ನು ಹಿಡಿದು ತಂದು ಸಾಕುವನು. ಹಸುಗಳ ಹಾಲಿನಲ್ಲಿ ಔಷಧಿ ಗಳನ್ನು ಕೊಡಲು ಬೇಗ ಬೇನೆಗಳು ಮೇಲಾಗತೊಡಗಿದವು. ಇದರಿಂದಾಗಿ ಇನ್ನಷ್ಟು ಮತ್ತಷ್ಟು ಹಸುಗಳನ್ನು ಕಾಡಿನಿಂದ ಹಿಡಿದು ತಂದು ಸಾಕಲು 'ಪಶುಪತಿ' ಎಂಬ ಪ್ರಶಸ್ತಿಗೆ ಪಾತ್ರನಾಗುವನು. ಹಸುಗಳಿಂದ ಹುಟ್ಟಿದ ಹೋರಿಗಳಿಂದಕೃಷಿಯನ್ನುಮಾಡಲು ಮೊದಲು ಮಾಡಿ'ಸಂಕರ್ಷಣಮೂರ್ತಿ' ಎಂದು ಬಿರುದಾಂಕಿತನಾಗುವನು. ಜೊತೆಗೆ ವೈದ್ಯದಲ್ಲಿ 'ಭಿಷಕ್ತಮ'ನೆಂದು ಬಣ್ಣಿಸಿಕೊಳ್ಳುವನು. ಬಹುಜನ ರೋಗಿಗಳು ಅವನಲ್ಲಿಗೆ ಬಂದು ಚಿಕಿತ್ಸೆ ಪಡೆದು ರೋಗಮುಕ್ತರಾಗುವರು. ತುಂಬಾ ಆರೋಗ್ಯವಂತರಾಗಿ ರುದ್ರ ದೇವನಿಗೆ ಆಕರ್ಷಿತರಾಗಿ ಆತನನ್ನು ಆರಾಧಿಸಿ 'ರುದ್ರಗಣ' ರೆಂದು ಪ್ರಖ್ಯಾತ ರಾಗುವರು. ರುದ್ರಗಣರೆಲ್ಲ ಸೇರಿ ಒಮ್ಮೆ ಗಂಭೀರವಾಗಿ ಚಿಂತನಗೈಯು ವರು: ರುದ್ರದೇವನು ಕೇವಲ ನಾಲ್ಕುಕಾಲಿನ ಹಸುಗಳಿಗೆ ಪಶುಪತಿ ಯೆಂದೇಕೆ ಹೇಳಬೇಕು? ನಮ್ಮ ಬಾಳು ಪಶುಸಹಜವಾಗಿಲ್ಲವೆ ? ಮಾನವೀ ಯತೆ ನಮ್ಮಲ್ಲಿದೆಯೆ ? ನಮಗೇಕೆ ನಮ್ಮೊಡೆಯನಾದ ರುದ್ರದೇವನು 'ಪಶುಪತಿ'ಯೆಂದೆನಿಸಬಾರದು ? ಎಂದು ಯೋಜಿಸಿ, ಇದನ್ನೊಮ್ಮೆ ರುದ್ರ ದೇವನ ಮುಂದಿರಿಸುವರು, ಆಗ ಆ ರುದ್ರದೇವನು ಅಂತರ್ಮುಖಿಯಾಗಿ ಆಳವಾಗಿ ಚಿಂತನಗೈಯುವನು. ಮಾನವರ ಪಶುತ್ವಕ್ಕೆ ಕಾರಣವನ್ನು ಕಂಡುಕೊಳ್ಳುವನು. ಮಲತ್ರಯವೇ ಪಾಶವೆಂದು, ಇದುಳ್ಳವನೇ ಪಶು ವೆಂದು, ಇದಿಲ್ಲದವನೇ ಪತಿಯೆಂದು ಅಂತ:ಪ್ರಜ್ಞೆಯಿಂದ ಕಂಡುಕೊಂಡು ರುದ್ರಗಣರಿಗೆ ಬೋಧಿಸುವನು. ಅಕ್ರಿಯೆ, ಅಜ್ಞಾನ, ಅಣುಭಾವಗಳೇ ಮಲ ಗಳೆಂದು ಇವನ್ನು ಕಳೆಯಲು ಕ್ರಿಯೆ. ಜ್ಞಾನ, ಬೃಹದ್ಭಾವಗಳು ಅವಶ್ಯ ವೆಂದು, ಈ ಮೂರನ್ನು ಸಂಸ್ಕಾರಗಳೆಂದು ಇವುಗಳನ್ನು ಪಡೆದರೆ ತ್ರಿಮಲ

ವೆಂಬ ಪಾಶೆಗಳು ತೊಲಗಿ ಪಶುತನ ಪರಿಹಾರವಾಗಿ ಪತಿಭಾವವುಂಟಾಗು ವುದೆಂದು ರುದ್ರದೇವನು ಕಂಡುಕೊಳ್ಳುವನು. ಅಲ್ಲಿಂದ ಔಷಧಿಗಳಿಂದ ಶಾರೀರ ಚಿಕಿತ್ಸೆಯೊಡನೆ ಕ್ರಿಯೆ, ಜ್ಞಾನ, ವೇಧಾಸಂಸ್ಕಾರಗಳಿಂದ ಆಧ್ಯಾತ್ಮ ಚಿಕಿತ್ಸೆಯನ್ನು ಆರಂಭಿಸುವನು. ಪಶುಪತಿಯಾದ ರುದ್ರದೇವನಿಂದ ಬಂದುದರಿಂದ ಇದನ್ನು ಪಶುಪತಿ ಮತವೆಂದು ಕರೆಯಲಾಯಿತು.

ಶ್ರೀರುದ್ರದೇವನು ಕ್ರಿಯಾ–ಮಂತ್ರ–ವೇಧಾ ಎಂಬೀ ದೀಕ್ಷಾತ್ರಯ ಗಳನ್ನು ಕಂಡು ಹಿಡಿದು ಪ್ರಯೋಗದಲ್ಲಿ ತಂದು ಪ್ರಥಮ ಶ್ರೀಗುರುವಾ ದನು. ಅರುಹಿನ ಕುರುಹಾಗಿ ಕ್ರಿಯಾಲಿಂಗವನ್ನು ರೂಪಿಸಿ ಶಿರೋಧಾರಣ ವ್ರತಕ್ಕೆ ನಾಂದಿಯನ್ನು ಹಾಡಿದನು.

"ತನುತ್ರಯಗತಾನಾದಿ ಮಲತ್ರಯಮಸೌ ಗುರುಃ ।
ದೀಕ್ಷಾತ್ರಯೇಣ ಸಂದಹ್ಯ ಲಿಂಗತ್ರಯಮುಪಾದಿಶತ್॥"

ಪಶುಪತಿರುದ್ರದೇವನು ಪಾಶಪತ ಶಿವಾಚಾರ ಧರ್ಮವನ್ನು ಉತ್ಪಾ ದಿಸಿ ಉಪದೇಶಿಸಿದನ್ನು ಕಾರಣಾಗಮ ಹೀಗೆ ನಿರೂಪಿಸಿದೆ. ಅನಾದಿ ವೀರಶೈವ ಧರ್ಮಕ್ಕೆ ಇರುವ ಹೆಸರುಗಳನ್ನು ಈ ಕೆಳಗಿನ ಅದೇ ಕಾರಣಾಗಮ ದಲ್ಲಿ ಹೀಗೆ ಉಲ್ಲೇಖವಿದೆ.

"ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ।
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ॥

ಅತ್ಯಾಶ್ರಮ, ಪಾಶುಪತ, ಶಾಂಭವ, ಶಿರೋವ್ರತ. ಶಿವಾಚಾರ ಮೊದಲಾದ ಹೆಸರುಗಳು ವೇದಾಂತವೆನಿಸಿದ ಉಪನಿಷತ್ತುಗಳಲ್ಲಿಯೇ ಉಲ್ಲೇಖವಾಗಿವೆ.

ಏಕೋಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಲ್ಲೋಕಾನೀಶತ
ಈಶನೀಭಿಃ ।

ಪ್ರತ್ಯಜ ಜನಾಸ್ತಿಪ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ
ವಿಶ್ವಾಭುವನಾನಿ ಗೋಪ:॥

" 'ಓಂ ದ್ಯಾವಾ ಭೂಮೀ ಜನಯನ್ ದೇವ ಏಕ:'
'ಏಕೋಹಿ ರುದ್ರೋ ನ ದ್ವಿತೀಯಾಯ ತಸ್ಥು:'
ಎಂದುದು ಶ್ರುತಿ, ನಂಬುವುದು ಕಾಣಿರಣ್ಣಾ !...." —ಬಸವಣ್ಣ

ಅಂತೆಯೇ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರಥಮ ಪರಿಚ್ಛೇದದ ಕೊನೆಯಲ್ಲಿ ವೀರಶೈವವು ಮತ್ತು ಸಿದ್ಧಾಂತಶಿಖಾಮಣಿ ಗ್ರಂಥವು ಪಶುಪತಿ ಮತಸಾರವೆಂದು ಸ್ಪಷ್ಟವಾಗಿ ಸಾರಿದೆ. ಅಲ್ಲದೆ ಅದೇ ಕೃತಿಯ ಮಾಹೇಶ್ವರ ಸ್ಥಲದಲ್ಲಿ,

"ವಿಶ್ವಸ್ಮಾದಧಿಕೋ ರುದ್ರೋ ವಿಶ್ವಾನುಗ್ರಹಕಾರಕ:।
ಇತಿ ಯಸ್ಯ ಸ್ಥಿರಾ ಬುದ್ಧಿ: ಸ ವೈ ಮಾಹೇಶ್ವರ: ಸ್ಮೃತ:॥

ಮಾಹೇಶ್ವರತ್ವ ಸಿದ್ಧಿಗೆ ವಿಶ್ವಾಧಿಕನೂ ವಿಶ್ವಾನುಗ್ರಹಕಾರಕನೂ ಆಗಿರುವವನು ರುದ್ರನೆಂಬ ಸ್ಥಿರಬುದ್ಧಿಯನ್ನು ತಾಳುವುದೇ ಕಾರಣವೆಂದು ಹೇಳಬೇಕಾದರೆ ರುದ್ರನ ಪ್ರಭಾವ ವೀರಶೈವರ ಮೇಲೆ ಅದರಲ್ಲಿಯೂ ಮಾಹೇಶ್ವರರ ಮೇಲೆ ಎಷ್ಟೊಂದಿರಬೇಕೆಂಬುದು ಅರಿಕೆಯಾಗುತ್ತದೆ. ಬಸವಣ್ಣನವರೂ ಈ ಮಾತನ್ನು ಮನಸಾರೆ ಒಪ್ಪಿ, "ಓಂ ದ್ಯಾವಾಭೂಮೀ ಜನಯನ್ ರುದ್ರ ಏಕ:। ವಿಶ್ವಾಧಿಕೋರುದ್ರೋ ನ ದ್ವಿತೀಯಾಯತಸ್ಥು:। ಎಂದುದು ಶ್ರುತಿ, ನಂಬುವುದು ಕಾಣಿರಣ್ಣ" ಎಂದು ಮುಂತಾಗಿ ಹೇಳಿ ಉಳಿದವರನ್ನೂ ನಂಬ ಹಚ್ಚುವನು.

"ರುದ್ರನೇತ್ರಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾ:।
ರುದ್ರಾಕ್ಷಧಾರಣಾದೇವ ಮುಚ್ಯಂತೇ ಸರ್ವಪಾತಕೈ:।
ದುಷ್ಟಚಿತ್ತಾ ದುರಾಚಾರಾ ದುಷ್ಪ್ರಜ್ಞಾ ಅಪಿ ಮಾನವಾ:॥
ರುದ್ರಾಕ್ಷಂ ಧಾರಯೇತ್ ಪ್ರಾಜ್ಞ: ಶಿವಪೂಜಾಪರಾಯಣ:।
ರುದ್ರಾಕ್ಷಧಾರಣಂ ವಕ್ಷೇ ರುದ್ರ ಸಾಯುಜ್ಯಸಿದ್ಧಯೇ॥

ಜಪ: ಪಂಚಾಕ್ಷರಾಭ್ಯಾಸ: ಪ್ರಣವಾಭ್ಯಾಸ ಏ ವವಾ ।
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಂ॥
ಭಸ್ಮೋದ್ಧೂಲಿತಸರ್ವಾಂಗಾ ಧೃತರುದ್ರಾಕ್ಷಮಾಲಿಕಾ:।
ಯೇ ಭವಂತಿ ಮಹಾತ್ಮಾನೋರುದ್ರಾಸ್ತೈನಾತ್ರ ಸಂಶಯ:॥

ಇತ್ಯಾದಿಯಾಗಿ ಪಶುಪತಿಮತೋತ್ಪಾದಕನಾದ ರುದ್ರದೇವನಬಗೆಗೆ ಸಿದ್ಧಾಂತ ಶಿಖಾಮಣಿ ತಳೆದ ಭಾವ ಅನನ್ಯ ಸಾಧಾರಣವಾದುದು. ಅನಾದಿ ವೀರಶೈವ ಉತ್ಪಾದಕನಾಗಿದ್ದುದರಿಂದ ಈ ಭಾವನೆಗಳಿಗೆ ಅವಕಾಶವಾಗಿದೆ. ಅಲ್ಲದೆ ರುದ್ರಗಣರಾದ ಮಹಾಹೇಶ್ವರರು ರುದ್ರವಂಶೀಯರು. ರುದ್ರದೇವನು ಅಂದಿನ ರುದ್ರಗಣರಿಗೆ ಮಹಾಪಾಶುಪತ ಶಿವಾಚಾರದವರಿಗೆ ಜಗದ್ಗುರು ವಾಗಿದ್ದನು. ಆತನಿಂದಲೆ ಅವರೆಲ್ಲರೂ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುವ ಸ್ಥಲ ಸಂಪನ್ನರಾಗಿದ್ದರು.

ಭುಂಜೀತ ರುದ್ರಭುಕ್ತಾನ್ನಂ ರುದ್ರಪೀತಂ ಜಲಂ ಪಿಬೇತ್ ।
ರುದ್ರಘ್ರಾತಂ ಸದಾ ಜಿಘ್ರೇದಿತಿ ಜಾಬಾಲಕೀ ಶ್ರುತಿ:॥

ಎಂಬೀ ಮಂತ್ರಮಯ ಶ್ಲೋಕವನ್ನು ಸಿದ್ಧಾಂತ ಶಿಖಾಮಣಿ ಧರ್ಮ ಗ್ರಂಥವು ತನ್ನ ಪ್ರಸಾದ ಸ್ವೀಕಾರಸ್ಥಲದಲ್ಲಿ ಉಲ್ಲೇಖಿಸಿದೆ. ಇದರಿಂದ ಈ ಕೃತಿಯು ಪಶುಪತಿ ಮತಸಾರವೆಂಬುದು ನೂರ್ಮಡಿಗೂ ಸಿದ್ಧವಾಗು ತ್ತದೆ. ಅಂತೆಯೇ ವೀರಶೈವವೂ ಸಹ ! ಅನಾದಿ ವೀರಶೈವಕ್ಕೆ 'ಮಹಾ ಪಾಶುಪತ ಶಿವಾಚಾರ' ಎಂದು ಹೆಸರಿದ್ದಿತು.

"ರುದ್ರೇಣ ದೀಕ್ಷಿತೋ ಭೂತ್ವಾಸ್ಕಂದ: ಶಿವಸಮೋಭೂತ್
ಶಿವಾಚಾರ ರಹಸ್ಯಸ್ಯ ಜಗತ್ಯಾಂ ಪ್ರಥಮಂ ಗತ: ।
ರುದ್ರೋ ಲಿಂಗಮುಪಾಸೀತ ತಸ್ಮೈ ತಸ್ಮೈನಮೋನಮ:
ಸರ್ವದೇವಾತ್ಮಕಂ ರುದ್ರಂ ನಮಸ್ಕುರ್ಯಾತ್ ನಿರಂತರಂ॥

ಕಥಿತಾ: ಶ್ರೀರುದ್ರೇಣೈವ ಲಿಂಗಸ್ಯಾರ್ಚನಸೂಚಿತಾ:
ಸಂತಿ ರುದ್ರೇಣ ಕಥಿತಾ: ಶಿವಧರ್ಮಾ: ಸನಾತನಾಃ।
ವೀರಭದ್ರೋಯಥಾರುದ್ರಸ್ತ್ವನ್ಯೇಚ ಗುರವಃ ಸ್ಮೃತಾ:
ಗುರೋರ್ಜ್ಞಾತಾಶ್ಚ ಗುರವೋ ವಿಖ್ಯಾತಾ: ಭುವನತ್ರಯೇ ॥"

—ಸ್ಕಾಂದ, ಕೇದಾರಖಂಡ

ಇತ್ಯಾದಿ ಪ್ರಮಾಣಗಳಿಂದ ರುದ್ರಶಿವಾಚಾರ್ಯನೇ ಪ್ರಪ್ರಥಮದಲ್ಲಿ ಶಿವಾಚಾರ ರಹಸ್ಯವನ್ನು ಕಂಡುಕೊಂಡು ಉಳಿದವರಿಗೆ ಬೋಧಿಸಿ ಪ್ರಥಮ ಗುರುವಾದನು, ಲಿಂಗವಿತ್ತು ಲಿಂಗವಾದನು; ಜಂಗಮವಾದನು. ಲಿಂಗಾರ್ಚನ ಸನಾತನ ಶಿವಧರ್ಮಗಳು ರುದ್ರಕಥಿತಗಳು ರುದ್ರಭದ್ರರಿಂದ ಗುರು ಪರಂಪರೆ ಬೆಳೆದು ಬಂದಿದೆ, ಮಾಹೇಶ್ವರ (ಅಯ್ಯಗಳ) ವಂಶ ರುದ್ರದೇವನಿಂದ ಮೊದಲಾಗಿದ, ಮಾಹೇಶ್ವರರು ಬೇರೆಯಲ್ಲ ರುದ್ರಗಣರು ಬೇರೆಯಲ್ಲ ವೀರ ಭದ್ರನಿಂದೆ ವೀರಶ್ರೀಯನ್ನು ಪಡೆದು ವೀರಮಾಹೇಶ್ವರರಾದರು. ಆ ವೀರತ್ವ ಅಶುದ್ಧ ಮಾಯೆಯನ್ನು ಗೆಲುವಿಕೆ !

" ವಿದ್ಯಾಯಾಂ ರಮತೇಯಸ್ಮಾನ್ಮಾಯಾಂ ಹೇಯಾಂಶ್ಚವದ್ರಾಹೇತ !
ಅನೇನೈವ ನಿರುಕ್ತೇನ ವೀರಮಾಹೇಶ್ವರಾ ; ಸ್ಮೃತಾಃ॥ —ರೇ, ಗೀತೆ

ಸಿದ್ಧಾಂತ ಶಿಖಾಮಣಿ ಧರ್ಮಗ್ರಂಥವು ವೀರಮಾಹೇಶ್ವರತ್ವದ ನಿರೂಪಣವನ್ನು ತುಂಬಾ ಅರ್ಥವತ್ತಾಗಿ ಮಾಡಿದೆ. ವೀರತನ ಅಶುದ್ಧಮಾಯೆಯನ್ನು ಹೇಯ ಮಾಡಿ ಬಿಡುವಂತಹದು. ವೀರೇಶನು ತಾನು ಅಶುದ್ಧಮಾಯೆಯನ್ನು ಗೆದ್ದಂತೆ ತನ್ನ ಅನುಯಾಯಿಗಳನ್ನು ಹೇಯಮಾಯಾವಂತರನ್ನಾಗಿಸಿ ವೀರಮಾಹೇಶ್ವರ ವಂಶದ ಮೂಲ ಪುರುಷನಾದನು. ಭದ್ರನತಂದೆ ರುದ್ರ, ದೇವನು ಪಶುಪತಿ ಬಿರುದಾಂಕಿತನಾಗಿ ಪಶುಪತಿಮತ ಉತ್ಪಾದಕನಾದನು. ಆ ಪಶುಪತಿಮತ ಸಾರವೇ ವೀರಶೈವಧರ್ಮ. ಅದನ್ನೆ ಪ್ರತಿಪಾದಿಸಿ ಸಿದ್ಧಾಂತ ಶಿಖಾಮಣಿ ವೀರಶೈವದ ಏಕೈಕ ಧರ್ಮಗ್ರಂಥವಾಗಿದೆ.

# ಶಿವಾಚಾರ್ಯರು— ಸಮಾಜ ಸುಧಾರಕರು.

( ಸಾಮಾಜಿಕ ಸಮ್ಯಕ್ ಚಿಂತನ )

ಈ ಮಾತು ಸತ್ಯಕ್ಕೆ ಸತ್ಯ. ಸಾರ್ವಕಾಲಿಕ ಸತ್ಯ. ಪುರಾತನ ಕಾಲದಿಂದ ನೂತನ ಕಾಲದವರೆಗೆ ಏರಿಳಿತಗಳಿಲ್ಲದೆ, ಅಡೆತಡೆಗಳಿಗೆ ಸಿಲುಕದೆ, ಕಂಟಕದ ಕಣಿಯಲ್ಲಿ ಬೀಳದೆ, ವಿನಾಶಕ ಮಾರ್ಗ ಹಿಡಿಯದೆ, ವಿಧಾಯಕ ಮಾರ್ಗದಲ್ಲಿ ಸಾಂಸ್ಕಾರಿಕ ಮಾಧ್ಯಮದಲ್ಲಿ ಮುಂದುವರಿಯುತ್ತ ಸರ್ವರಲ್ಲಿ ಶಿವಾಚಾರ ಶಿವ ವಿಚಾರಗಳನ್ನು ಸ್ಫುಟೀಕರಿಸುತ್ತ ಇರುವ ಸತ್ಯ ಸಂಗತಿಯನ್ನು ಯಾರೂ ತೆಗೆದುಹಾಕುವಂತಿಲ್ಲ; ಹಾಕುವುದಿಲ್ಲ. ಶಿವಾಚಾರ್ಯರಷ್ಟು ವಿಶಾಲವಾಗಿ ಸಮಾಜ ಸುಧಾರಣೆಯನ್ನು ಬೇರೆ ಯಾರೂ ಮಾಡಿಲ್ಲ., ಮಾಡಲಾಗಿಲ್ಲ.

ಸ್ಥಾವರ ಕಲ್ಲು ದೈವ, ಕಾಷ್ಠದೈವ. ಕುಲದೈವಗಳ ಆರಾಧನೆಯನ್ನು ಬಿಡಿಸಿ ಶಿವದೀಕ್ಷಾ ಸಂಸ್ಕಾರವನ್ನಿತ್ತು, ಕರದಿಷ್ಟ ಆರಾಧನೆಗೆ ಹಚ್ಚಿದವರು, ಹಚ್ಚುವವರು ಶಿವಾಚಾರ್ಯರು. ಅಭಕ್ಷ್ಯಭಕ್ಷ್ಯಗಳನ್ನು ಅಪೇಯ ಪಾನಗಳನ್ನು ಬಿಡಿಸಿ ಬಿಡಿಸುವವರು ಶಿವಾಚಾರ್ಯರು. ಅಜ್ಞಾನದಿಂದ ಕಲ್ಪಿಸಿಕೊಂಡ ಕುಲ ಜಾತಿ ಪಂಥಗಳನ್ನು ಮೇಲು ಕೀಳುಗಳನ್ನು ಶಿವದೀಕ್ಷಾ ಸಂಸ್ಕಾರದಿಂದ ತೊಡೆದುಹಾಕಿ ಭಕ್ತಿಪಥದ ಶಿವಪಥದ ಸಮಾನತೆಯನ್ನು ಸಂಪಾದಿಸಿಕೊಡುವವರು ಶಿವಾಚಾರ್ಯರು. ಚಂದ್ರಕಾಂತದಲ್ಲಿ ಜಲ, ಸೂರ್ಯಕಾಂತದಲ್ಲಿ ಅನಲ, ಬೀಜದಲ್ಲಿ ಭೂಜ ಸಿದ್ಧವಾಗಿರುವಂತೆ ಸರ್ವರಲ್ಲಿ ಚಿನ್ಮಯಾತ್ಮಕ ಶಿವನಿರುವ ನೆಲೆಯನ್ನು ತಿಳಿಸಿ ತೋರಿಸಿಕೊಡುವವರು ಶಿವಾಚಾರ್ಯರು. ಕ್ರಿಯಾಶಕ್ತಿ ಜ್ಞಾನ ಶಕ್ತಿ ಭಾವಶಕ್ತಿಗಳನ್ನು ಅಭಿವ್ಯಕ್ತಿಗೊಳಿಸುವವರು ಶಿವಾಚಾರ್ಯರು. ಶಿವಾರ್ಚನ, ಶಿವಾರ್ಪಣ, ಶಿವಾನುಭವ ಸತ್ಪಥಗಳನ್ನು ತಮ್ಮ ಕರ್ತವ್ಯ ದೃಷ್ಟಿಯಿಂದ

ಹಿಡಿಸುವವರು, ಹಿಡಿಸಿ ಮುನ್ನಡೆಸುವವರು ಶಿವಾಚಾರ್ಯರು ದೇಹ ಭಾವ ವನ್ನು ತೊಡೆದು, ಮಾಂಸಪಿಂಡವನ್ನು ತೊಳೆದು ಮಂತ್ರಮಯ ಪಿಂಡರ ನ್ನಾಗಿಸಿ ಭವದ ಬೇರನ್ನು ಬಗಿದು, ಭಕ್ತಿ ಸಸಿಯನ್ನು ನಾಟಿ, ಭಾವಪುಷ್ಪ ವನ್ನರಳಿಸಿ ಪ್ರಸಾದ ಫಲವನ್ನು ಬಿಡಿಸುವವರು ಶಿವಾಚಾರ್ಯರು. ನ್ಯಾಯ ನೀತಿ ರೀತಿ ಧರ್ಮ ದರ್ಶನ ದಯೆ ದಾನ ಮೊದಲಾದವುಗಳನ್ನು ಪ್ರಬೋಧಿಸಿ ಪರಿಶುದ್ಧರನ್ನಾಗಿಸುವವರು ಶಿವಾಚಾರ್ಯರು.

"ಶುದ್ಧಾಂತ:ಕರಣೇ ಜೀವೇ ಶುದ್ಧಕರ್ಮ ವಿಪಾಕತಃ।
ಜಾಯತೇ ಗುರುಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ।
ಜಂತುರಂತ್ಯಶರೀರೋऽಸೌ ಪಿಂಡಶಬ್ದಾಭಿದೇಯಕಃ॥"

—ಸಿ. ಶಿಖಾಮಣಿ

ಹೃದಯಕಲಂಕವನ್ನು ಕಳೆದು ಶುದ್ಧ ನಡೆ ಶುದ್ಧನುಡಿಗಳು ವೃದ್ಧಿಸಿ ಶಿವಭಕ್ತಿ ಬಲಿದು ಚರಮ ಶರೀರಿಯಾಗಿ ಅಂಗನೆನಿಸಬೇಕಾದರೆ ಗುರು ಕಾರುಣ್ಯದಿಂದಲ್ಲದೆ ಸಾಧ್ಯವಿಲ್ಲೆಂಬುದು ಯಾರಿಗೆ ತಿಳಿಯದು ? ತ್ರಿವಿಧಾಂಗ ಗಳಿಗೆ ತ್ರಿವಿಧಲಿಂಗಗಳನ್ನು, ಷಡಂಗಗಳಿಗೆ ಷಡ್ಲಿಂಗಗಳನ್ನು ಕರುಣಿಸಿ ಲಿಂಗಾಂಗಿಗಳನ್ನಾಗಿಸುವಾತನು ಶಿವಾಚಾರ್ಯನು.

"ಶಿವಭಕ್ತಿಸಮಾವೇಶೇ ಕ್ವ ಜಾತಿ ಪರಿಕಲ್ಪನಾ ?
ಇಂಧನೇಷ್ವಗ್ನಿದಗ್ಧೇಷು ಕೋವಾಭೇದ: ಪ್ರಕೀರ್ತ್ಯತೆ ?।"

—ಸಿ. ಶಿಖಾಮಣಿ

ಶಿವದೀಕ್ಷಾಸಂಸ್ಕಾರದಿಂದ ಶಿವಭಕ್ತಿಯುಂಟಾದ ಬಳಿಕ ಅಂದರೆ ಲಿಂಗಾಂಗಿಗಳಾದ ಬಳಿಕ ಜಾತಿ ಭೇದಕಲ್ಪನೆಯೆ ಇರದು. ಎಲ್ಲರೂ ಲಿಂಗಾಂಗಿ ಗಳು, ಲಿಂಗವಂತರು; ಸಮಾನರು. ನಾನಾಜಾತಿಯ ಕಟ್ಟಿಗೆಗಳನ್ನು ತಂದು ಕೆಂಡದಲ್ಲಿ ಸುಟ್ಟ ಬಳಿಕ ಕಾಷ್ಠಭೇದವಿರಬಲ್ಲುದೇನು ? ಯಾವ ಜಾತಿಯವರೇ ಇರಲಿ, ಗುರುವಿನಿಂದ ದೀಕ್ಷೆಯಾದ ಬಳಿಕ ಆತನ ಪೂರ್ವಜಾತಿ ಉಳಿಯದು

"ಚಿದ್ರೂಪಂ ಪರಮಂಲಿಂಗಂ... ಸರ್ವ ವಿಶ್ವಕಾರಣಂ ನಿರಸ್ತವಿಶ್ವಕಾಲುಷ್ಯ ಸತ್ತಾನಂದಪರಿಸ್ಫೂರ್ತಿ ಸಮುಲ್ಲಾಸ ಕಲಾಮಯಂ, ಮುಮುಕ್ಷುಭಿರುಪಾಸಿತಂ, ಸರ್ವಭೂತಾನಾಮಂತ ಸ್ತ್ರಿಸ್ಥಾನಗೋಚರಂ, "ಮೂಲಾಧಾರೇಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ। ಜ್ಯೋತಿರ್ಲಿಂಗಂಸದಾಭಾತಿಯದ್ಬ್ರಹ್ಮೇತ್ಯಾಹುರಾಗಮಾ:॥" ಲಿಂಗಂ ಬ್ರಹ್ಮ ಸನಾತನಂ, ಸತ್ತಾನಂದಚಿದಾತ್ಮಕಂ, ಇಷ್ಟಲಿಂಗಮಿದಂ ಸಾಕ್ಷಾತ್ ಅನಿಷ್ಟ ಪರಿಹಾರಕಂ!, ಲಿಂಗಧಾರೀಸದಾಶುದ್ಧ:, ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗ ಮೇಷು ಚ। ಲಿಂಗ ಧಾರಣ ಮುಖ್ಯಾತಂ ವೀರಶೈವಸ್ಯ ನಿಶ್ಚಯಾತ್॥" ಇತ್ಯಾದಿಯಾಗಿ ಶಿವಾಚಾರ್ಯರು ಲಿಂಗಧಾರಣ, ಲಿಂಗಲಕ್ಷಣ, ಲಿಂಗಾರಾಧನ ಫಲ, ಲಿಂಗ ಸರ್ವೋದ್ಧಾರ ಕಾರಣಗಳನ್ನು ಚನ್ನಾಗಿ ಬೋಧಿಸಿದ್ದಾರಲ್ಲದೆ ಲಿಂಗಧಾರಣ ಸಂಸ್ಕೃತಿ ವೇದಾಗಮಗಳಿಗಿಂತ ಪುರಾತನದ್ದೆಂದು ತಿಳಿಸಿದ್ದಾರೆ. ಅಂತೆಯೇ ಶಿವಾಚಾರ್ಯರು ಸನಾತನರು. ಶಿವಾಚಾರ್ಯರ ಮೂಲ ಪುರುಷರು ರುದ್ರಭದ್ರರು.ರುದ್ರ ಗಣರು ವೀರಗಣರು ವೀರಮಾಹೇಶ್ವರರು ಶಿವಾಚಾರ್ಯರು. ಶಿವಾಚಾರ್ಯರ ಸಾರ್ವಜನಿಕರ ಸುಧಾರಣ ಸಂಸ್ಕೃತಿ ವೇದ ಪೂರ್ವಕಾಲದ್ದು. ಆರ್ಯರು ಭಾರತ ದೇಶಕ್ಕೆ ಬಾರದ ಪೂರ್ವದಲ್ಲಿ ಶಿವಾಚಾರ್ಯ ಸಂಸ್ಕೃತಿ ಜೀವಂತವಾಗಿತ್ತು.ಸಾಮಾಜಿಕ ಸುಧಾರಣೆಯು ಮಣಿಹದಲ್ಲಿ ಎತ್ತರದ್ದಾಗಿತ್ತು. ಶಿವಾಚಾರ್ಯರ ಜೊತೆಗೆ ರುದ್ರಕನ್ನಿಕೆಯರು ವೀರಮಹಿಳೆಯರು ಶಿವಾಚಾರಿಣಿಯರು ಸಮಾಜೊದ್ಧಾರ ಕಾರ್ಯದಲ್ಲಿ ಸದಾನಿರತರಾಗಿದ್ದರು, ಸರ್ವಸ್ವತಂತ್ರರಾಗಿದ್ದರು. ಸೌಜನ್ಯ ಸೌಶೀಲ್ಯ ವಂತರಾಗಿದ್ದರು. ವೀರಶೈವ ನಾಮಕರಣದಿಂದ ವೀರಶೈವ ಪ್ರವರ್ತಕನಾದ ವೀರಭದ್ರನ ಕಾಲದಲ್ಲಿ ಪಂಚಾಚಾರಗಳಾಚರಣೆ ಪರಮಾಧಿಕವಾಗಿದ್ದಿತು. ವೀರ ಪತ್ನಿಯಾದ ಭದ್ರಕಾಳೀ ಭವಾನಿಯು " ಪಂಚಾಚಾರ ಪರಾಶಕ್ತಿ " ಎಂದು ಪ್ರಶಸ್ತಿ ಪಡದಿದ್ದಳು. ಷಟ್‌ತ್ರಿಂಶತ್ತತ್ತ್ವಪ್ರಚಾರಿಣಿಯಾಗಿ ಶಿವಾಚಾರಿಣಿಯರಲ್ಲಿ ಶಿರೋಮಣಿಯಾಗಿದ್ದಳು. ಅನಾದಿರುದ್ರ ಭದ್ರರಕಾಲದಲ್ಲಿ ಅಷ್ಟಾವರಣ ಪಂಚಾಚಾರಗಳ ಪ್ರಾಬಲ್ಯ ಸಾಮಾಜಿಕರಲ್ಲಿ ಸಾತಿಶಯವಾಗಿದ್ದರೆ ಆದಿರೇಣುಕ ಶಿವಾಚಾರ್ಯರ ಕಾಲದಲ್ಲಿ ಅವುಗಳ ಜೊತೆಗೆ ಷಟ್‌ಸ್ಥಲಾಚರಣೆ ಹೆಚ್ಚಿದ್ದಿತು. ಶಿವಾಚಾರಿಣಿಯರು ಹೆಚ್ಚಿದ್ದರು. ಅನಾದಿ ವೀರಶೈವ ಸಂಸ್ಕೃತಿಯು ರುದ್ರ

ದೇವ ಜಗದ್ಗುರುವಿನಿಂದ ಆರಂಭವಾಗಿ, ವೀರಭದ್ರ ಜಗದ್ಗುರುವಿನಿಂದ ಬೆಳೆದು ಹೆಮ್ಮರವಾಗಿ ಆದಿರೇಣುಕ ಜಗದಾಚಾರ್ಯರಿಂದ ಹೂವು ಹಣ್ಣುಗಳನ್ನು ಬಿಟ್ಟಿತು.ಆಧುನಿಕ ವೀರಶೈವ ಸಂಸ್ಕೃತಿಯು ಶ್ವೇತಾಚಾರ್ಯ ಜಗದ್ಗುರು ಪಂಡಿತಾಚಾರ್ಯರು, ವೀರಶೈವ ಶಿಖಾರತ್ನ ಸಿದ್ಧನಾಥ ಶಿವಾಚಾರ್ಯರು, ಮಹಾ ವೀರಶೈವಧರ್ಮ ಮಾರ್ಗ ಪ್ರವರ್ತಕ ಶಿವಯೋಗಿ ಶಿವಾಚಾರ್ಯರು, ಸಿದ್ಧಮಲ್ಲ ಶಿವಾಚಾರ್ಯರು. ಇಮ್ಮಡಿ ಪಂಡಿತಾರಾಧ್ಯರು ವೀರಶೈವ ಪದ್ಮರವಿ ವಿರೂಪಾಕ್ಷದೇಶಿಕೇಂದ್ರರು, ವೀರಶೈವವಾರಿಧಿ ಚಂದ್ರ ಚಂದ್ರಗುಂಡ ಶಿವಾಚಾರ್ಯರು, ಜನಮನವನ ವಸಂತ ರೇವಣಸಿದ್ಧ ಶಿವಾಚಾರ್ಯರು, ಸೊಳ್ಳಡಿ ಸಾರ್ವಭೌಮ ಮರುಳಸಿದ್ಧ ಶಿವಾಚಾರ್ಯರು ನಿಷ್ನೋದ್ಧಾರ ನಿರುಪಮ ಉರಿಲಿಂಗ ಶಿವಾಚಾರ್ಯರು, ಉರಿಲಿಂಗ ಪೆದ್ದಿ ಶಿವಾಚಾರ್ಯರು,ರುದ್ರಮುನಿ ಶಿವಾಚಾರ್ಯರು, ಕರಿನಾಡ ಕರಿಬಸವೇಂದ್ರ ಶಿವಾಚಾರ್ಯರು, ಜಾತವೇದಮುನಿ ಶಿವಾಚಾರ್ಯರು ವಿಶ್ವೇಶ್ವರ ಶಿವಾಚಾರ್ಯರು (ಕಾಕತೀಯ ರಾಜಗುರು) ಆದಿ ವೀರಶೈವವೃಕ್ಷ ಬಿಟ್ಟ ಹೂವು ಹಣ್ಣುಗಳನ್ನು ಸಾಮಾಜಿಕರಿಗೆ ಸಾರ್ವಜನಿಕರಿಗೆ ಹಂಚುವ ಮಹಾಮಣಿಹಗಳನ್ನು ಮಾಡಿದರು. ಇವರುಗಳೆಲ್ಲ ಮಾಡಿದ ಆ ಮಹಾಮಣಿಹಗಳು ಕಣ್ಣು ಮುಂದೆ ಬಂದು ನಿಲ್ಲುತ್ತವೆ, ನೀಳಾಗಿ! ಇವರುಗಳಿಂದ ನಡೆದ ಸಾಹಿತ್ಯಕ ಸಾಂಸ್ಕೃತಿಕ ಸಾಮಾಜಿಕ ಸೇವಾಕಾರ್ಯಗಳು ಅಷ್ಟಿಷ್ಟಲ್ಲ.ಅವೆಲ್ಲ ತೆರೆದ ಕಣ್ಣುಳ್ಳವರಿಗೆ ತೋರುವವು; ತೊಳಗುವವು,

ವೀರಶೈವ ಶಿವಾಚಾರ್ಯರ ಸಾಮಾಜಿಕ ಸಾಂಸ್ಕೃತಿಕ ಉದ್ಧಾರ ಕಾರ್ಯವೆಂದರೆ ಶಿವದೀಕ್ಷಾಸಂಸ್ಕಾರ, ಅಷ್ಟಾವರಣ–ಪಂಚಾಚಾರ ಪ್ರದಾನ, ಷಟ್‌ಸ್ಥಲಾಚರಣ ಬೋಧನ, ದೀನ ದಲಿತೋದ್ಧರಣ. ಸಂಸ್ಕರಣ ಕಾಳಾಮುಖ ಬೌದ್ಧ ಜೈನ, ಬ್ರಾಹ್ಮಣಾದಿಗಳ ಧಾರ್ಮಿಕದಾಳಿಗಳನ್ನು ಎದುರಿಸಿ ಯಾವ ರಕ್ತಕ್ರಾಂತಿಯಿಲ್ಲದೆ ವಿಜಯ ಸಂಪಾದನ, ಕನ್ನಡ ಸೊಳ್ಳಡಿ ಶತಕ ಸಿದ್ಧಾಂತ ಸೂತ್ರ, ಭಾಷ್ಯ. ಕಾವ್ಯ ಪ್ರಬಂಧ ಮುಂತಾದ ಸಾಹಿತ್ಯ ರಚನ. ಸಮಾಜ ವಿಸ್ತರಣ, ಮಠಗಳಲ್ಲಿ ದಾಸೋಹ ನಿರ್ವಹಣ, ಭಕ್ತರಲ್ಲಿದ್ದ ಇರುವ ಒಡಕುಗಳನ್ನು ಹೋಗಲಾಡಿಸಿ ಅಂದರೆ ಒಳಪಂಗಡಗಳನ್ನು ಏಕೀಕರಿಸುವಿಕೆ ವೀರ

ಶೈವರ ಎಲ್ಲ ಒಳಪಂಗಡಗಳಲ್ಲಿ ಹೊಕ್ಕು ಬಳಸುವಿಕೆ ಲಿಂಗಾಚಾರ ಗಣಾಚಾರ ಗಳನ್ನು ಉಳಿಸುವಿಕೆ ಇವೆ ಮೊದಲಾದವುಗಳೆಂದು ಧಾರಾಳವಾಗಿ ಹೇಳಬಹು ದಾಗಿದೆ. ಮೇಲ್ಕಂಡ ಇವರು ಇವುಗಳನ್ನೆಲ್ಲ ಕ್ರಿ. ಶ. ೬ನೆಯ ಶತಮಾನ ದಿಂದ ಮೊದಲ್ಮಾಡಿ ಮುಂದುವರಿಸಿಕೊಂಡು ಬಂದಿದ್ದಾರೆ. ಇದಕ್ಕೆ ಐತಿಹಾಸಿಕ ಚಾರಿತ್ರಿಕ ಪ್ರಮಾಣಗಳಿವೇ ಅಯ್ಯಗಳು ಮಾಹೇಶ್ವರರು ಸಾಮಾಜಿಕ ಕಾರ್ಯ ನಿರ್ವಹಣ ಹೊತ್ತು ನಿತ್ತರಿಸುವಲ್ಲಿ ತೊಡಗಿ ಮನೆ ಹೊಲಹರದ ಕಾರ್ಯಗಳನ್ನು ಕೈಬಿಟ್ಟು ಬಹ್ವಂಶದಲ್ಲಿ ಬಡವರಾದರು, ಸಾಮಾಜಿಕವಾಗಿ ಶುಭಾಶುಭಗ ಳನ್ನು ಆಗುಹೋಗುಗಳನ್ನು ಒಡಕು ತೊಡಕುಗಳನ್ನು ನೋಡಿಕೊಳ್ಳುವುದ ರಲ್ಲಿ ನಿರತರಾಗಿದ್ದುದರೆ ಫಲವಾಗಿ ಆರ್ಥಿಕವಾಗಿ ದುರ್ಬಲರಾಗಿರುವ ಪ್ರಸಂಗ ಒದಗಿತೆಂದರೆ ಸತ್ಯಕ್ಕೆ ದೂರಾದ ಮಾತೇನಲ್ಲ. ಸಾಮಾಜಿಕ ಸರ್ವಾಂಗೀಣ ಜೀವನದ ಸಾರ್ಥಕತೆಗೆ ಸತತ ಶ್ರಮಿಸಿ ಸಣ್ಣಗಾದರು ಹಳ್ಳಿಗಳ ಗಣಂಗಳು, ಹಡಪದವರು ಮಡಿವಾಳರು, ಕುಂಬಾರರು, ಪೂಗಾರರು, ಗಾಣಿಗರು ಮುಂತಾದ ಲಿಂಗಧಾರಿ ನಿಮ್ನವರ್ಗದವರನ್ನು ಹಾಸುಹೊಕ್ಕಾಗಿ ಬಳಸಿ ಶುಭಾಶುಭ ಕಾರ್ಯಗಳನ್ನು ನೆರವೇರಿಸಿ ಸಮಾಜದಿಂದ ಹೊರಕ್ಕೆ ಹೋಗ ದಂತೆ ಉಳಿಸಿ ಕಾಪಾಡಿಕೊಂಡು ಬಂದರು ಬರುತ್ತಿರುವವರು ಅಯ್ಯಗಳು. ವೀರಶೈವಮೂಲ ಧರ್ಮವಾದ ಲಿಂಗಧಾರಣ,ಪಾದೋದಕ ಪ್ರಸಾದ ಪ್ರದಾನಾ ದಿಗಳನ್ನು ಚ್ಯುತಿಯಿಲ್ಲದಂತೆ ನಡೆಸಿಕೊಂಡು ಬಂದಿರುವುದನ್ನು ಕಡೆಗಣ್ಣಿನಿಂದ ಕಾಣುವಂತಿಲ್ಲ. ಸಾಮಾಜಿಕರ ಕಲ್ಯಾಣ ಕಾರ್ಯಗಳನ್ನು ನೆರವೇರಿಸುವ ಹೊಣೆ ಯನ್ನು ಹೊತ್ತು ನಿತ್ತರಿಸುತ್ತ ಬಂದವರು ಮಾಹೇಶ್ವರರಲ್ಲದೆ ಮತ್ತಾರು ? ಹೆಚ್ಚೇನು, ಪೂರ್ವ ಪರಂಪರೆಯಿಂದ ಬಂದ ಸಾಮಾಜಿಕ ಸರ್ವಾಂಗೀಣ ಸಂಸ್ಕಾರಗಳನ್ನು ಸಾಂಗವಾಗಿ ಸಾಗಿಸುತ್ತ ಸಮಾಜವನ್ನು ಸಜೀವಗೊಳಿಸಿದ ಗೊಳಿಸುತ್ತಿರುವ ಸಯ್ಪು–ಸತ್ಕೀರ್ತಿಗಳು ಗಣಂ (ಅಯ್ಯ) ಗಳಿಗೆ ಸೇರಿದವು ಗಳು. ಧಾರ್ಮಿಕ ಕಟ್ಟು ಕಟ್ಟಳೆಗಳನ್ನು ಕೈಬಿಡದೆ ಸಾಮಾಜಿಕರಲ್ಲಿ ನಡೆಯಿಸಿ ಕೊಂಡು ಬಂದ ಬರುತ್ತಿರುವ ಮಠಸ್ಥರಲ್ಲಿ ಸಾಮಾಜಿಕರು ಸರ್ವಥಾ ಋಣಿ ಗಳಲ್ಲವೆ ?

ಸಮಾಜದ ಪ್ರಧಾನ ಘಟಕರು ಶಿವಾಚಾರ್ಯರು. ಸಮಾಜದ ಸರ್ವತೋಮುಖ ಭಾರವನ್ನು ಹೊತ್ತು ಸಾಭಾರಿಗಳೆನಿಸಿರುವರು. ರಾಜರಿಗೆ ಪ್ರಜರ ಬೆಳವಣಿಗೆ ಅದೆಷ್ಟು ಅಗತ್ಯವೋ ಶಿವಾಚಾರ್ಯರಿಗೆ ಸಾಮಾಜಿಕ ಬೆಳವಣಿಗೆ ಅಷ್ಟೇ-ಅದಕ್ಕೂ ಹೆಚ್ಚು ಅಗತ್ಯ. ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣರನ್ನು ಶಿಕ್ಷಣ-ಸಾಧನ-ಸಂಸ್ಕಾರಗಳಿಂದ ಅಭಿವೃದ್ಧಿಗೆ ತಂದು ಉದ್ಧಾರಗೈವ ಭಾರ ಶಿವಾಚಾರ್ಯರದು. ಅವರ ಉನ್ನತಿಯೇ ಶಿವಾಚಾರ್ಯರ ಉನ್ನತಿ! ದೀಕ್ಷೆ-ಶಿಕ್ಷೆಗಳನಿತ್ತು ಹೊರಗೆ ಉಳಿಯಲುವುದಿಲ್ಲ ಶ್ರೀಗುರು ಕ್ರಿಯೆ ಜ್ಞಾನಾನುಭವಗಳ ಮೂಲಕ ಪಾದೋದ ಪ್ರಸಾದಗಳ ಮೂಲಕ ಒಳಕ್ಕೆ ಪ್ರವೇಶಿಸುತ್ತಾನೆ. ಬಿತ್ತು ಮೊಳೆತು ಹೆಮ್ಮರದ ಅಂಗಾಂಗಗಳಲ್ಲೆಲ್ಲ ಬೆರತಿರುವಂತೆ ಬೆರೆದಿರುತ್ತಾನೆ.

"ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು. ವಿಚಾರವೆಂಬ ಹೂವಾಯಿತ್ತು.
ಆಚಾರವೆಂಬ ಕಾಯಾಯಿತ್ತು.ಅದು ನಿಷ್ಪತ್ತಿಗೆ ಉಂಡು ಕಳಚಿಬೀಳುವಲ್ಲಿ
ಕೂಡಲಸಂಗಮದೇವ, ತನಗೆ ಬೇಕೆಂದೆತ್ತಿಕೊಂಡ!"

ಈ ವಚನದಲ್ಲಿ ಬಸವಣ್ಣನವರೆ ಸ್ಪಷ್ಟಗೊಳಿಸಿದ್ದಾರೆ. ಅಲ್ಲದೆ ಈ ಬಗೆಗೆ ಶಿವಯೋಗಿ ಶಿವಾಚಾರ್ಯರು

**ದೀಕ್ಷಾ ಗುರು :**

" ದೀಯತೇ ಪರಮಂ ಜ್ಞಾನಂ ಕ್ಷೀಯತೇ ಪಾಶಬಂಧನಂ ।
ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾಗುರುರಿಃ ಸ್ಮೃತಃ॥
ಅಖಂಡಂ ಯೇನ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು ।
ಆತ್ಮಯೋಗ ಪ್ರಭಾವೇನ ಸಗುರುಃ ವಿಶ್ವಭಾಸಕಃ॥"

**ಶಿಕ್ಷಾಗುರು :**

"ದೀಕ್ಷಾಗುರುರಸೌ ಶಿಕ್ಷಾಹೇತುಃ ಶಿಷ್ಯಸ್ಯಬೋಧಕಃ।
ಪ್ರಶ್ನೋತ್ತರಪ್ರವಕ್ತಾಚ ಶಿಕ್ಷಾಗುರುರ್ನಿರೀರ್ಯತೇ॥

ಸಂಸಾರ ತಿಮಿರೋನ್ಮಾಥ ಶರಚ್ಚಂದ್ರ ಮರೀಚಯಃ।
ವಾಚೋ ಯಸ್ಯ ಪ್ರವರ್ತಂತೇ ತಮಾಚಾರ್ಯಂ ಪ್ರಚಕ್ಷತೇ॥
ಸಂದೇಹವನ ಸಂದೋಹ ಸಮುಚ್ಛೇಧಕುಠಾರಿಕಾ।
ಯತ್ಸೂಕ್ತಿಧಾರಾ ವಿಮಲಾ ಸಗುರೂಣಾಂ ಶಿಖಾಮಣಿಃ॥
ಯತ್ಸೂಕ್ತದರ್ಪಣಾಭೋಗೇ ನಿರ್ಮಲೇ ದೃಶ್ಯತೇ ಸದಾ ।
ಮೋಕ್ಷಶ್ರೀರ್ಬಿಂಬರೂಪೇಣ ಸ ಗುರುರ್ಭವತಾರಕಃ॥"

ಜ್ಞಾನಗುರು : (ಮೋಕ್ಷಗುರು)

"ಉಪದೇಷ್ಟೋಪದೇಶ್ಯಾನಾಂ ಸಂಶಯಚ್ಛೇದಕಾರಕಃ ।
ಸಮ್ಯಗ್ ಜ್ಞಾನಪ್ರದಃ ಸಾಕ್ಷಾದೇಷ ಜ್ಞಾನಗುರುಃ ಸ್ಮೃತಃ ॥
ಕಟಾಕ್ಷಲೇಶ ಮಾತ್ರೇಣ ವಿನಾ ಧ್ಯಾನಾದಿಕಲ್ಪನಂ ।
ಶಿವತ್ವಂ ಭಾವಯೇದ್ಯತ್ರ ಸ ವೇಧ ; ಶಾಂಭವೋಮತ : ॥
ಶಿವವೇಧಕರೇ ಜ್ಞಾನೇ ದತ್ತೇಯೇನ ಸುನಿರ್ಮಲೇ ।
ಜೀವನ್ಮುಕ್ತೋಭವೇಚ್ಛಿಷ್ಯಃ ಸಗುರುರ್ಜ್ಞಾನಸಾಗರಃ ॥"

೮. ಶಿವಾಚಾರ್ಯರ ಅನುಭವ ಅಪರೋಕ್ಷಾನುಭವ. ಪರಿಪಕ್ವಾನುಭವ! ಸಮಾಜೋದ್ಧಾರಕನಾದ ದೇಶಿಕನು ದೀಕ್ಷಾಗುರು, ಶಿಕ್ಷಾಗುರು, ಜ್ಞಾನ (ಮೋಕ್ಷ) ಗುರು ಎಂದು ಮೂರುಬಗೆ ! ಈ ಮೂವರು ಭಿನ್ನರಲ್ಲ. ಅಭಿನ್ನರು.

ಪರಮಜ್ಞಾನವನ್ನು ಕರುಣಿಸಿ ಪಾಶಬಂಧನವನ್ನು ಕಳೆಯುವಾತನೆ ದೀಕ್ಷಾಗುರು. ಎಲ್ಲೆಲ್ಲಿ ಎಲ್ಲರಲ್ಲಿ ಇರುವ ಅಖಂಡ ಚೈತನ್ಯವನ್ನು ಆತ್ಮಯೋಗ ಪ್ರಭಾವದಿಂದ ಅಳವಡಿಸಿ ಉದ್ಧರಿಸುವ ಗುರುದೇವನೆ ವಿಶ್ವಭಾಸಕನು.

ಆ ದೀಕ್ಷಾಗುರುವೆ ಶಿಷ್ಯನ ಬೋಧನೆಗೆ ಅಂದರೆ ಪ್ರಶ್ನೋತ್ತರ ರೂಪದಲ್ಲಿ ಶಿಕ್ಷಣ ಕೊಡುವಲ್ಲಿ ಶಿಕ್ಷಾಗುರು ! ಬೋಧ ಶಿಕ್ಷಣಕಾರಣ ವಾಕ್ಯಗಳು ಸಂಸಾರಾಂಧಕಾರವನ್ನು ಸಂಹರಿಸುವ ಶರಚ್ಚಂದ್ರಕಿರಣಗಳಂತಿರಬೇಕು. ಇರುವಾತನೆ ಆಚಾರ್ಯನು. ಮತ್ತು ಶಿಷ್ಯರ ಸಂದೇಹವನ ಸಂದೋಹವನ್ನು

ಕತ್ತರಿಸುವ ಕುಠಾರದಂತೆ ಸೂಕ್ತಿಧಾರೆಗಳನ್ನು ಸಂಪಾದಿಸಿದಾತನೆ ಶ್ರೀಗುರು ಶಿಖಾರತ್ನನು. ಶ್ರೀಗುರು ಸೂಕ್ತಿಯೇ ಸ್ವಚ್ಛ ಬೃಹದ್ದರ್ಪಣ ಅದರಲ್ಲಿ ಮುಕ್ತಿ ಶ್ರೀಯ ಅಂದರೆ ಮೋಕ್ಷಲಕ್ಷ್ಮಿಯ ಮೂಲಸ್ವರೂಪವೆ ಬಿಂಬಿಸುತ್ತದೆ. ಆ ಶಕ್ತಿಸಂಪನ್ನ ಶ್ರೀಗುರುವೆ ಅಥವಾ ಶಿವಾಚಾರ್ಯನ ಭವತಾರಕನು.

ದೃಗ್ ದೃಶ್ಯ ದ್ರುಷ್ಟೃಗಳ ಸಂಶಯವನ್ನು ಛೇದಿಸುವ ಸಮ್ಯಗ್ ಜ್ಞಾನ (ಅನುಭಾವ) ವನ್ನು ಕರುಣಿಸುವಾತನೆ ಸಾಕ್ಷಾತ್ ಜ್ಞಾನ (ಮೋಕ್ಷ) ಗುರು ಜ್ಞಾನಪಾರಗನಾದ ವೇಧಾಗುರುದೇವನ ಕಟಾಕ್ಷವೇಶ ಮಾತ್ರದಿಂದ ಧ್ಯಾನಾದಿಕಲ್ಪನೆಯಿಲ್ಲದ ಶಿವತ್ವಭಾವವುಂಟಾಗುವಿಕೆಯೆ ವೇಧ ವೆನಿಸುತ್ತದೆ, ಶಿವವೇಧಕರ ಜ್ಞಾನವೇ ಮಹಾಜ್ಞಾನ. ಅದುಳ್ಳಾತನೆ ಜೀವನ್ಮುಕ್ತ. ಅದನ್ನು ಶಿಷ್ಯರಿಗೆ ಕರುಣಿಸುವ ಗುರುದೇವನೆ ಜ್ಞಾನ ಸಾಗರನು. ಹೀಗೆ ಮಾಡುವುದ ಕ್ಕಿಂತ ಸಮಾಜೋದ್ಧಾರ ಕಾರ್ಯ ಬೇರಿಲ್ಲ. ಈ ಮಹಾಕಾರ್ಯಕಾರಿಯೆ ಮಹಾ ಜ್ಞಾನ ಸಾಗರನಾದ ಶ್ರೇಷ್ಠ ಶಿವಾಚಾರ್ಯ.

"ಗುರೋರ್ವಿಜ್ಞಾನಯೋಗೇನ ಕ್ರಿಯಾ ಯತ್ರ ವಿಲೀಯತೇ ।
ತತ್ಕ್ರಿಯಾಲಿಂಗಮಾಖ್ಯಾತಂ ಸರ್ವೈರಾಗಮಪಾರಗೈಃ ॥
ಪರಾನಂದಂ ಚಿದಾಕಾರಂ ಪರಬ್ರಹ್ಮೈವ ಕೇವಲಂ।
ಲಿಂಗಂ ಸದ್ರೂಪತಾಪನ್ನಂ ಲಕ್ಷ್ಯತೇ ವಿಶ್ವಸಿದ್ಧಯೇ ॥
ಲಿಂಗಮೇವ ಪರಂಜ್ಯೋತಿರ್ಭವತಿ ಬ್ರಹ್ಮಕೇವಲಂ।
ತಸ್ಮಾತ್ತತ್ಪೂಜನಾದೇವ ಸರ್ವಕರ್ಮಫಲೋದಯಃ॥" —ಸಿ.ಶಿ.

ಶಿವಾಚಾರ್ಯನು ಉದ್ಧಾರಕ್ಕಾಗಿ-ಕರುಣಿಸುವ ಆತನ ವಿಜ್ಞಾನಯೋಗ ವುಳ್ಳ ಕ್ರಿಯಾ (ಇಷ್ಟ) ಲಿಂಗದಿಂದ ವಿಶ್ವಸಿದ್ಧಿಯಾಗುತ್ತದೆ. ಸಮಸ್ತ ಸತ್ಕ್ರಿಯೆಗಳಿಂದಾಗುವ ಫಲೋದಯವುಂಟಾಗುತ್ತದೆ. ಇದಕ್ಕಿಂತ ಚೈತನ್ಯ ದಾಯಕ ಉದ್ಧಾರವೇನು ? ಶಿವಾಚಾರ್ಯನ । ಶಿವಯೋಗದಬಲದಿಂದ ಸದ್ರೂಪತ್ವವನ್ನು ಪಡೆದ ಕ್ರಿಯಾ(ಇಷ್ಟ) ಲಿಂಗವು ಚಿದಾನಂದ ಸ್ವರೂಪ ಪರಶಿವಬ್ರಹ್ಮವೆ ಆಗಿರುತ್ತದೆ, ಪರಂಜ್ಯೋತಿ ಪರಬ್ರಹ್ಮವೇ ಆಗಿರುತ್ತದೆ. ಅದರ ಅರ್ಚನಾದಿಗಳಿಂದ ಸರ್ವಕ್ರಿಯೆಗಳಿಂದಾಗುವ ಫಲಗಳುಂಟಾಗಿ ಉದ್ಧಾರ

ಸಂಸಿದ್ಧವಾಗುತ್ತದೆ. ಈ ಎಲ್ಲ ವಿವರಣೆಯಿಂದ ಶಿವಾಚಾರ್ಯನ ಸಮಾಜೋದ್ಧಾರ ಕಾರ್ಯ ಅನನ್ಯ ಸಿದ್ಧವಾಗುತ್ತದೆ. ಶರಣಾಗತಿ ಮಾತ್ರ ಸ್ಥಿತಿಯುಳ್ಳ ಶರಣನಿಂದ ಸುತರಾಂ ಸಾಧ್ಯವಿಲ್ಲ. ಸಾಧ್ಯವಿದ್ದರೂ ಸಾಧನಾ ಹಂತದಲ್ಲಿ ಆತನ ಸ್ಥಿತಿಯಿರದು, ಅದರಲ್ಲಿಯೂ ಸಮಾಜ ಸಾದನಾ ಹಂತ ಆತನಿಗೆ ಇದ್ದದ್ದೂ ಇರದು; ಇರುವುದಿಲ್ಲ ಇದು ಸ್ಥಲ ಪರಾಮರ್ಶೆಯ ಸ್ವಾನುಭೂತಿಯುಳ್ಳವರಿಗೆ ಮಾತ್ರ ಸಂ-ವಿದಿತ; ಸಂಭಾವಿತ.

ಶಿವಾಚಾರ್ಯರ ಸಂಸ್ಕಾರ ಸಂಸ್ಕೃತಿ ಧರ್ಮ ದರ್ಶನ, ಕ್ರಿಯಾಶೀಲತೆ, ಕಾಯಕ, ದಾಸೋಹ, ಸ್ತ್ರಿಸಾಮ್ಯ ಸಿದ್ಧಾಂತ ಇತ್ಯಾದಿ ಏನೆಲ್ಲವೂ ಸಾಮಾಜಿಕ ನಿಷ್ಠ. ಆಯ್ದಕ್ಕಿ ಮಾರಯ್ಯ, ನೂಲಿಯ ಚಂದಯ್ಯಾದಿಗಳ ಕಾಯಕ ವೈಯಕ್ತಿಕ ಮತ್ತು ಕೌಟುಂಬಿಕ, ಅಂತೆಯೇ ಸೀಮಿತ. ಆದಿರೇಣುಕ ಶಿವಾಚಾರ್ಯರಾದಿಯಾಗಿ ಸರ್ವಶಿವಾಚಾರ್ಯರು ಸಾಮಾಜಿಕ ಮಾತ್ರವಲ್ಲದೆ ಸಾಮೂಹಿಕವೂ ಆಗಿದ್ದವು. ಕೊರತೆ ಕಲಂಕರಹಿತವಾಗಿದ್ದವು. ಇದೆಲ್ಲವೂ ಈಚೆಗೆ ಸಂಶೋಧಿತವಾಗಿ ಲಭ್ಯವಾಗುತ್ತಿವೆ. ಇಲ್ಲಿ ನಮ್ಮ ನಿಷ್ಠೆ ನೆಲೆನಿಲ್ಲುತ್ತಿದೆ. ನಿಜಾನುಭೂತಿ ವಿಕಾಸವಾಗುತ್ತಿದೆ. ಸಾಮಾಜಿಕ ಶಿವಾಚಾರ್ಯರ ಪರಂಪರೆಯ ಪ್ರಾಚೀನತೆ, ಸಾಂಸ್ಕಾರಿಕ ಸಾಂಸ್ಕೃತಿಕ ಸೈದ್ಧಾಂತಕ ಶ್ರೀಮಂತತೆ, ಸಾಮಾಜಿಕ ಸೃಜನಶೀಲತೆ ನಿಜಾನುಭೂತಿ ವಿಕಾಸಕ್ಕೆ ಮೂಲ ಕಾರಣ. ಮತ್ತು ಮೌಲ್ಯಕಾರಣ. ಇದನ್ನೆಲ್ಲ ನಮ್ಮ 'ವೀರಶೈವ ಉಗಮ ನಿಗಮ' ಎಂಬೀಗ್ರಂಥವಲ್ಲಿ ಕಾಣಬಹುದಾಗಿದೆ.



# ಶಿವಯೋಗಿ ಶಿವಾಚಾರ್ಯ ಶಿವಾನುಭಾವಿಯ ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ಚಿದಾನಂದ ಪರಾಕಾಶ ಶಿವಾನುಭಾವಿ, ಶಿವಾಗಮ ಪರಿಪಕ್ವ ಪರಿಜ್ಞಾನಿ, ಸನಾತನ ಶಿವಭಕ್ತಿ ಸಂರಕ್ಷಕ, ಬೌದ್ಧಾದಿ ಪ್ರತಿ ಸಿದ್ಧಾಂತ ಮಹಾದ್ವಾಂತ ಪ್ರಚಂಡಾದಿತ್ಯ. ಮಹಾವೀರಶೈವ ದರ್ಮ ಮಾರ್ಗ ಪ್ರವರ್ತಕ, ಶಿವತತ್ವ ಪರಿಜ್ಞಾನ ಪೂರ್ಣಚಂದ್ರ. ಇವುಗಳಿಂದ ದಿಗಂತ ಕೀರ್ತಿಯುಳ್ಳ ಶ್ರೀ ಶಿವಯೋಗಿ ಶಿವಾಚಾರ್ಯನು, ಕೇವಲ ಶಿವಾಚಾರ್ಯನಲ್ಲ, ಪರಾಪರ ಪರಮಾಚಾರ್ಯನಾಗಿದ್ದಾನೆ, ಶಿವಾದ್ವೈತಸಿದ್ಧಾಂತ ಸಿಂಧು ಸುಧಾರಕರನಾಗಿದ್ದಾನೆ. ಕಾಮಿಕಾದಿ ವಾತುಲಾಂತ ಇಪ್ಪತ್ತೆಂಟು ವೀರಶೈವಾಗಮಗಳನ್ನು ಹದಿನೆಂಟು ಪುರಾಣಗಳನ್ನು ನಾಲ್ಕು ವೇದಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅಸಾಧಾರಣ ಚಿಂತನ ಮಾಡಿ, ಆಚರಣ ಮಾಡಿ, ವಿಶಿಷ್ಟಾಚಾರ ಸಿದ್ಧಿಯನ್ನು ಪಡೆದು, ಸಕಲಾರ್ಥ ಪ್ರಕಾಶಕವಾದ ಸರ್ವದೋಷದೂರವಾದ ಪರಿಶುದ್ಧ ಮನಸ್ಸಿಗಳಿಂದಆದರಿತವಾದ ವಿವೇಕಿಗಳ ಪ್ರಮೋದಕಾರಣವಾದ ಅಸನ್ಮಾರ್ಗ ನಿರಾಸಕವಾದ ಮಾನವ ಸರ್ವಸ್ವವಾದ ವೀರಶೈವಮಹಾತಂತ್ರವೆನಿಸಿದ ಸರ್ವತಂತ್ರ ಶ್ರೇಷ್ಠವಾದ 'ಸಿದ್ಧಾಂತ ಸಿಖಾಮಣಿ' ಎಂಬ ಮಹಾ ಸಿದ್ಧಾಂತ ಗ್ರಂಥವನ್ನು ಲೋಕಾನುಗ್ರಹಕ್ಕಾಗಿ ಸೃಜಿಸಿದ್ದಾನೆ ಲೊಕೋತ್ತರವಾಗಿ ಶಿವಾನುಭಾವಿ ಸಿವಯೋಗಿ ಶಿವಾಚಾರ್ಯನು. ಸರ್ವತತ್ತ್ವೋನ್ಮೇಷ ವೈದುಷ್ಯ ಶಿವಾಚಾರ್ಯನದು. ಬ್ರಹ್ಮಾಂಡ ರೂಪವನ್ನು ಬ್ರಹ್ಮಸ್ವರೂಪವನ್ನು ಚಿತ್ರ ಭಿತ್ತಿ ನ್ಯಾಯದಲ್ಲಿ ಕಣ್ಣೆದುರಿಗೆ ಕಮನೀಯವಾಗಿ ಚಿತ್ರಿಸಿ ನಿಲ್ಲಿಸುತ್ತಾನೆ. ಸತ್ಯಶಿವ ಸೌಂದರ್ಯ ಪ್ರದರ್ಶನ ಪ್ರತಿಭೆಯನ್ನು ಒಂದೇ ಒಂದು ಶ್ಲೋಕ ರೂಪಸೂತ್ರದಲ್ಲಿ ಪ್ರದರ್ಶಿಸಿದ್ದಾನೆ, ಪ್ರಾರಂಭದಲ್ಲಿಯೆ ಸಚ್ಚಿದಾನಂದ ಸ್ವರೂಪ ಸಾಕ್ಷಾತ್ಕಾರವನ್ನು ಪ್ರತ್ಯಕ್ಷವಾಗಿಸುತ್ತಾನೆ: ವೇದಾಂತ ಸಿದ್ಧಾಂತ ಸಮನ್ವಯವನ್ನು ಬ್ರಹ್ಮ ಬ್ರಹ್ಮಾಂಡ ಸಮನ್ವಯವನ್ನು ಆಧೇಯಾಧಾರ ಸಮನ್ವಯ

ವನ್ನು ತನ್ನ ಸಮ್ಯಕ್ ದೃಷ್ಟಿಯಿಂದ ಸಾಧಿಸಿ ಸರ್ವಸಮನ್ವಯಾಚಾರ್ಯನಾಗಿದ್ದಾನೆ. ಪರಶಿವ ಬ್ರಹ್ಮಭಿತ್ತಿಯ ಮೇಲೆ ತ್ರೈಲೋಕ್ಯ ಸಂಪದಾಲೇಖ್ಯವನ್ನು ಸಮುಲ್ಲೇಖಿಸಿ ಲೋಕೋತ್ತರ ಕಲಾವಂತ ಚಿತ್ರಕಾರನಾಗಿದ್ದಾನೆ.

ಮೂವತ್ತಾರು ತತ್ತ್ವಸಂಚಯ ದಿಂದೊಡಗೂಡಿದ ಚಿನ್ಮಹೋಡಧಿಯನ್ನು ಕಂಡು ಕಾಣಿಸಿದ್ದಾನೆ, ವಿಶ್ವದ ಬೆಳಗು, ವಿಶ್ವದ ಸೊಬಗು, ವಿಶ್ವದ ಸೊಗಸು ಗುಣಾತೀತವೈಭವವುಳ್ಳ ಆ ಪರಾತ್ಪರದೇ ಎಂದು ಮನಗಂಡಿದ್ದಾನೆ; ನಿರ್ಣಯಿಸಿ ನಿರ್ವಚನಿಸಿದ್ದಾನೆ. ಪರಾತ್ಪರತ್ವದಲ್ಲಿ ಕಳಂಕದ ಮಾತೇ ಇಲ್ಲ. ಅಶಾಂತಿ ಅಸುಖಗಳ ಸಂಭವವೇ ಇಲ್ಲ. ಏನೆಲ್ಲ ವಿಗ್ರಹಗಳು ಆತನವೆ; ಏನೆಲ್ಲ ವರ್ತನಗಳು ಅತನವೆ; ಆತನಿಗೆ ಹೊರತಾದ ಮೂಲೋಕವಿಲ್ಲ. ತನ್ನಿಚ್ಛೆಯಿಂದ ತಾನೇ ಏನೆಲ್ಲವನ್ನು ಮಾಡಬಲ್ಲ. ಪರಾವಲಂಬಿಯಲ್ಲ. ಆತ ಸ್ವಾವಲಂಬಿ; ಸರ್ವಶಕ್ತ. ಆಪರಶಿವಬ್ರಹ್ಮನಿಗೆ ಮೇಲೆ ಒಡೆಯರಿಲ್ಲ. ಆತನೇ ಮಹೇಶ, ಮಹಾದೇವ, ಆ ಮಹಾದೇವತ್ವ ಅಸ್ವಾಭಾವಿಕವಲ್ಲ. ಅದು ಸರ್ವೋತ್ತಮ; ಅನುಪಮ.

ಸರ್ವಲೋಕಪ್ರಕೃತಿಯಾದ ಆತನ ಶಕ್ತಿ ಆತನ ಧರ್ಮಚಾರಿಣಿ. ಶಿವಕಾರಿಣಿ; ಶಿವನ ಇಚ್ಛಾಜ್ಞಾನಾದಿರೂಪಿಣಿ. ವಿಶ್ವಭಾವಿನಿ. ಸುವಿದ್ಯಾಪ್ರದಾಯಿನಿ. ಪರಮಾನಂದ ಪ್ರಬೋಧಲಹರಿ; ಪರಮೇಶ್ವರಿ. ಲೋಕಮಾತೆ; ಲೋಕವಂದಿತೆ; ಸಚ್ಚಿದಾನಂದಲಕ್ಷಣಲಕ್ಷಿತೆ. ಸಮಸ್ತಲೋಕ ನಿರ್ಮಾಣ ಸಮವಾಯ ಸ್ವರೂಪಿಣಿ. ಪರವಾಣಿ; ಪರಾಶಕ್ತಿ. ಅವಳಿಂದ ಪರಶಿವನು ಸರ್ವಸ್ವತಂತ್ರನು, ಶಕ್ತಿವಂತನು; ಸರ್ವಜ್ಞನು, ನಿತ್ಯಪೂರ್ಣನು. ವಿಶ್ವವಿಭುವು. ಆ ಪರಶಿವನಿಂದ ಅಪರಶಿವನ ಅವತರಣ. ಅಪರಶಿವನಿದ್ದ–ಇರುವ ಕೈಲಾಸ ವರ್ಣನ, ಅಪರಶಿವಶಿವೆಯರವರ್ಣನ, ಅವರನ್ನು ಓಲೈಸುವ ದೇವತಾತತಿ ಸೇವಾವರ್ಣನ, ಆದೇಶವರ್ಣನ, ರೇಣುಕಗಣೇಶ್ವರನು ಅವನಿಗೆ ಅವತರಿಸಿದ ವರ್ಣನ, ತೆಂಗಣದ ಮಲಯಾಚಲ, ಅಲ್ಲಿದ್ದ ಅಗಸ್ತ್ಯಾಶ್ರಮ, ಅತ್ರ ಮುದಲ್ಲಿಷ್ಟ

ಅಗಸ್ತ್ಯಮಹಾಮುನಿ, ಅತನ ಬಳಿಗೈತಂದ ಆದಿರೇಣುಕಗಣೇಶ್ವರನ ಪಾದ ಪೂಜೆ, ಅಗಸ್ತ್ಯಮುನಿ ಪ್ರಾರ್ಥನೆ ಇವೆಲ್ಲವುಗಳ ವರ್ಣನೆಯಲ್ಲಿ ಶಿವಕವಿ ಶಿವಯೋಗಿ ಶಿವಾಚಾರ್ಯನು ತೋರಿದ ಕಾವ್ಯಶೈಲಿ ಕಾವ್ಯಧರ್ಮ, ಭಾವಧ್ವನಿ ಅರ್ಥಾಲಂಕಾರಾದಿಗಳು ಯಾವ ಮಹಾಕವಿಗಳಿಗಿಂತಲೂ ಕಡಿಮೆಯಿಲ್ಲ. ಪ್ರತಿ ಯಾಗಿ ಶಿವಾಚಾರ್ಯನಿಗೆ ಕವಿಗುರು ಎಂಬ ಹಿರಿಮೆಯನ್ನು ತರುವಂತವು ಗಳಾಗಿವೆ; ತಂದಿವೆ. ಇದನ್ನು ವಿವರವಾಗಿ ರಸಪೂರ್ಣವಾಗಿ ಅರಿಯಬೇಕೆಂದರೆ ನಾವೇ ಬರೆದ "ರೇಣುಕಗೀತೆಯ ಕಾವ್ಯ-ಶಾಸ್ತ್ರ ಮೀಮಾಂಸೆ" ಎಂಬ ಕೃತಿಯನ್ನು ತಪ್ಪದೆ ಓದಿತೀರಬೇಕು. ರೇಣುಕಗೀತೆಯಲ್ಲಿ ಗೇಯತೆ ಸೂತ್ರ ಬದ್ಧತೆ ಅಂದರೆ ಸಂಕ್ಷಿಪ್ತತೆಗಳಿರುವಂತೆ ಭಾವಪೂರ್ಣ ರಸಮಯತೆ ಸೂಕ್ಷ್ಮತೆ ಗಳಿಂದ ಕೂಡಿ ಇಡೀ ಕಲಾಕೃತಿಯೇ ಒಂದು ಭಾವಗೀತೆಯಂತಿದೆ.

ಶಿವಕವಿ ಶಿವಾನುಭಾವಿ ಶಿವಯೋಗಿ ಶಿವಾಚಾರ್ಯನು ಸಮ್ಯಕ್ ದೃಷ್ಟಿ ಸರ್ವಾಂಗೀಣ ಸೈದ್ಧಾಂತಕನಾದುದು, ಭಾರತೀಯ ಯಾವ ಸಿದ್ಧಾಂತಗಳನ್ನು ನಿರಾಕರಿಸುವುದಿಲ್ಲ. ಸಾಲದ್ದಕ್ಕೆ ಅವೆಲ್ಲವುಗಳ ಸಮನ್ವಯೀಕರಣ ಸುಂದರ ವಾಗಿದೆ. ಅನುಪಮವಾದ ಸೈದ್ಧಾಂತಿಕ ಸಂಪ್ರತಿಭೆಯಿಂದ ಸರ್ವೋನ್ನತ ಕಲಾಕೃತಿಯಾಗಿವೆ.

ಜೀವನವನ್ನು ಅತ್ಯಂತ ಆಳವಾಗಿ ಸರ್ವಾಂಗೀಣವಾಗಿ ಸಂವೀಕ್ಷಿಸಿದ ಸೈದ್ಧಾಂತಿಕ ಶಿವಯೋಗಿ ಶಿವಾಚಾರ್ಯನ ಭಾವಾಭಿವ್ಯಕ್ತಿಯಲ್ಲಿ ಯಾವ ಕೊರತೆಯಿಲ್ಲ. ಜೀವನದ ಸಾಧನದಲ್ಲಿ ಸತ್ ಪ್ರಗತಿಯಲ್ಲಿ ಸಂಭವಿಸುವ ಭಾವ.ವಿಭಾವ-ಅನುಭವಗಳನ್ನೆಲ್ಲ ಅರುಸ್ಥಲಸೌಧವನ್ನೇರುವ ನೂರೊಂದು ಹಂತಗಳ ಮುಖಾಂತರ ಮನೋಹರವಾಗಿ ಸಂಕ್ಷಿಪ್ತವಾಗಿಯಾದರೂ ಸಮಗ್ರ ವಾಗಿ ಸುಧಾಶ್ರಾವಿಯಾಗಿ ಸಮ್ಯಕ್ ಪರಿಸ್ಫೂರ್ತಿಯಲ್ಲಿ ರೇಣುಕಗೀತೆಯನ್ನು ಹಾಡಿದ್ದಾನೆ. ಸಿದ್ಧಾಂತ ಶಿಖಾಮಣಿಯನ್ನು ಸಿದ್ಧಗೊಳಿಸಿದ್ದಾನೆ. ರೇಣುಕಾ ಗಮವೆಂದೆನಿಸಿದ್ದಾನೆ. ಜೀವನದ ಊರ್ಜಿತ ಗತಿ ಪ್ರಗತಿಗಳಲ್ಲಿ ಸಂಭವಿಸುವ

## ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ

ಭಾವಸಂಬಂಧಗಳನ್ನು ಎಳೆಎಳೆಯಾಗಿ ಎದೆಯಲ್ಲಿ ಎರಕಗೊಳ್ಳುವಂತೆ ಎಸಗಿದ್ದಾನೆ. ಸಮಷ್ಟಿ ವ್ಯಷ್ಟಿ ಪ್ರಕೃತಿ ಪುರುಷರ ಕಾರ್ಯಕಾರಣ ಭಾವಗಳನ್ನು ಶಿವಾಚಾರ್ಯನು ತನ್ನ ಆಳವಾದ ಅನುಭಾವದ ಸಂಸ್ಪರ್ಶದಿಂದ ಅಂತರಂಗವನ್ನು ಸ್ಪಂದಿಸಿ ಅರಳಿಸುತ್ತಾನೆ. ವಿಶ್ವಭಾವವನ್ನು ಅಭಿವ್ಯಕ್ತಿಗೊಳಿಸುತ್ತಾನೆ. ವಿಶ್ವಚೈತನ್ಯ ಲಾವಣ್ಯವನ್ನು ತುಂಬುತ್ತಾನೆ. ಆತನು ಸಿದ್ಧಾಂತಿಸಿದ್ದೆಲ್ಲವೂ ಸರ್ವೋನ್ನತ ರತ್ನವಾಯಿತು. ಅವರು ತಮ್ಮ ಸಮನ್ವಯ ಸಿದ್ಧಾಂತಕ್ಕೆ ಬಳಸಿಕೊಂಡುದೆಲ್ಲವೂ ಪ್ರಾಮಾಣಿಕ ಸಂಹಿತೆಯಾಯಿತು. ಅವರು ಪ್ರಯೋಗಿಸಿದ ಪಾರಿಭಾಷಿಕಪದ ಪುಂಜಗಳೆಲ್ಲವೂ ಲಯಬದ್ಧವಾದ ಸೈದ್ಧಾಂತಿಕ ಭಾವಪೂರ್ಣ ಸಂಗೀತಧ್ವನಿಗಳಾಗಿವೆ. ಆ ಶಿವಾಚಾರ್ಯರ ಆಪ್ರಾಸಾದಿಕ ಮುಖದಿಂದ ಹೊರಹೊಮ್ಮಿದ ಭಾವಾನುಭಾವಗಳು ಭಾವ್ಯಭಾಷಾಮಯಿಯಾಗಿ ಸಹೃದಯರನ್ನು ಪುಳಕಿತಗೊಳಿಸುತ್ತವೆ. ಸಿದ್ಧಾಂತ ಶಿಖಾಮಣಿಯು ಸತತಕ್ಕೂ ಸಮನ್ವಯಿತ ಶ್ರೇಷ್ಠ ಸಿದ್ಧಾಂತವಾಗಿದೆ. ಭಾವ ಪ್ರಪಂಚಕ್ಕೂ ಭೌತಪ್ರಪಂಚಕ್ಕೂ ಒಂದು ಅನಿವಾರ್ಯ ನಂಟಸ್ತಿಕೆಯನ್ನು ನೆರವೇರಿಸಿದೆ, ಪರಾಪರ, ಚರಾಚರವೆಲ್ಲಕ್ಕೂ ಆ ನಂಟಸ್ತಿಕೆಯಲ್ಲಿ ನೆಲೆಯಿದೆ; ಬೆಲೆಯಿದೆ, ನಲೆ–ಕಳೆಗಳೂ ಇವೆ. ಪರಮಾನುಭಾವದಿಂದ ಪರಿಪೂರ್ಣಾಖಂಡ ಸಿದ್ಧಾಂತವನ್ನು ತನ್ನದೇ ಆದ ಪರಿಭಾಷೆಯಲ್ಲಿ ಪರಿಸ್ಫೂರ್ತಿಯಲ್ಲಿ ಪ್ರತಿಪಾದಿಸಿದೆ ಸಾರ್ವಕಾಲಿಕವಾಗಿ! ಇದೋ ಮನವಿಟ್ಟು ಆಲಿಸಿ:

" ಅಗಸ್ತ್ಯ ಮುನಿಶಾರ್ದೂಲ ಸಮಸ್ತಾಗಮ ಪಾರಗ ।
ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶೃಣು ಸಾದರಂ ॥
ಅಗಸ್ತ್ಯ ಬಹುಧಾ ಖ್ಯಾತಾಃ ಸಿದ್ಧಾಂತಾ ರುಚಿಭೇದತಃ ।
ಭಿನ್ನಾಚಾರಸಮಾಯುಕ್ತಾ ಭಿನ್ನಾರ್ಥಪ್ರತಿಪಾದಕಾಃ ॥
ಸಾಂಖ್ಯಂಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥

ವೇದ: ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಮಾಣಮಿತಿ ನಿಶ್ಚಿತಂ ॥

—ಸಿ. ಶಿಖಾಮಣಿ

ಆದಿರೇಣುಕ ಭಗವತ್ಪಾದರು ಅಗಸ್ತ್ಯಮುನಿಸಮರ್ಥನಿಗೆ ಅರ್ಪಣೆಕೊಡಿಸಿದುದನ್ನು ಶಿವಯೋಗಿ ಶಿವಾಚಾರ್ಯರು ಹೀಗೆ ನಿರೂಪಿಸಿದ್ದಾರೆ.

"ಸತ್ಯ ಶಿವಜ್ಞಾನವನ್ನುಂಟು ಮಾಡುವಂತಹದು ಶಿವಾದ್ವೈತ ಸಿದ್ಧಾಂತ! ಆವರವರ ರುಚಿ ಭೇದದಿಂದ ಸಿದ್ಧಾಂತಗಳು ಅನಂತ! ಅವೆಲ್ಲವು ಭಿನ್ನಾಚಾರಗಳಿಂದ ಕೂಡಿದವುಗಳು; ಭಿನ್ನಾರ್ಥಪ್ರತಿಪಾದಕಗಳು. ಸಾಂಖ್ಯ, ಯೋಗ, ಪಾಂಚರಾತ್ರ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ, ಪಾಶುಪತಾದಿಗಳು. ಇವು ಮಾನಿಸತಕ್ಕವುಗಳೇ ಹೊರತು ಯುಕ್ತಿ ಪ್ರಯುಕ್ತಿಗಳಿಂದ ತೆಗೆದು ಹಾಕತಕ್ಕವುಗಳಲ್ಲ. ಇವೆಲ್ಲಕ್ಕೂ ವೇದವೇ ಪ್ರಧಾನ. ಇವು ವೇದಾನುಸರಣ ಮಾಡುವುದರಿಂದ ಇವುಗಳಿಗೆ ಪ್ರಾಮಾಣಿಕತೆ ನಿಶ್ಚಿತವಾಗಿದೆ. ಆದರೆ,

"ವೇದೈಕದೇಶವರ್ತಿಭ್ಯ: ಸಾಂಖ್ಯಾದಿಭ್ಯೋಮಹಾಮುನೇ ।
ಸರ್ವವೇದಾನುಸಾರಿತ್ವಾಚ್ಛೈವತಂತ್ರಂ ವಿಶಿಷ್ಯತೇ॥
ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಂ।
ಸರ್ವವೇದಾರ್ಥರೂಪತ್ವಾತ್ ಪ್ರಮಾಣಂ ವೇದವತ್ಸದಾ॥

ಸಾಂಖ್ಯಾದಿ ದರ್ಶನಗಳು ವೇದದ ಏಕದೇಶವರ್ತಿಗಳು: ಆಂಶಿಕಗಳು. ವೀರಶೈವ ಸಿದ್ಧಾಂತ ಸರ್ವವೇದಾನುಸಾರಿಯಾದಿರುವುದರಿಂದ ಅಂದರೆ ದ್ವೈತ, ಅದ್ವೈತ, ದ್ವೈತಾದ್ವೈತ, ವಿಶಿಷ್ಟಾದ್ವೈತಾದಿಗಳನ್ನು ಮತ್ತು ಕ್ರಿಯೆ ಜ್ಞಾನಯೋಗ ಚರ್ಯ ನ್ಯಾಯ ಮೀಮಾಂಸೆ ಮೊದಲಾದವುಗಳನ್ನು ಒಳಗೊಂಡಿರುವುದರಿಂದ ಶಿವಾದ್ವೈತ ಸಿದ್ಧಾಂತ ಆವೆಲ್ಲವುಗಳಿಗಿಂತ ವಿಶಿಷ್ಟ

ವಾಗಿದೆ. ಸರ್ವವೇದಾರ್ಥರೂಪವಾಗಿರುವ ಕಾರಣ ವೇದದಂತೆ ಸಮಾ ಪ್ರಮಾಣಭೂತವಾಗಿದೆ.

ಶಿವಸಿದ್ಧಾಂತವು ಸಾಂಖ್ಯರಂತೆ ಪ್ರಕೃತಿಪುರುಷ ವಿಯೋಗಮುಕ್ತಿಯನ್ನು ಹೇಳದೆ ಸಮರಸಮುಕ್ತಿಯನ್ನು ಹೇಳುತ್ತದೆ. ಯೋಗದರ್ಶನದಂತೆ ಚಿತ್ತವೃತ್ತಿ ನಿರೋಧವನ್ನು ಹೇಳದೆ, ಚಿತ್ತವೃತ್ತಿಯನ್ನು ಚಿನ್ಮಯ ವೃತ್ತಿಯನ್ನಾಗಿಸಲು ಹೇಳುತ್ತದೆ. ಮತ್ತು ಸಮತ್ವಯೋಗವನ್ನು ಮಾತ್ರ ಪ್ರತಿಪಾದಿಸದೆ ಜೊತೆಗೆ ಸಮರಸಯೋಗವನ್ನು ಪ್ರತಿಪಾದಿಸಿ ಪೂರ್ಣಾಖಂಡಯೋಗವೆಂದೆನಿಸಿದೆ, ದ್ವೈತವಂತೆ ಕೇವಲ ಕರ್ಮವನ್ನಾಗಲಿ, ಅದ್ವೈತಿಯಂತೆ ಕೇವಲ ಜ್ಞಾನವನ್ನಾಗಲಿ ಅಂಗೀಕರಿಸದೆ ಕರ್ಮಯೋಗ ಜ್ಞಾನಯೋಗಗಳೆರಡನ್ನು ಅಂಗಿಕರಿಸಿದೆ. ಜಗನ್ಮಿಥ್ಯೆಯೆಂದು ಹೇಳದೆ, ಸತ್ಯವೆಂದು ಸಾರಿದೆ. ಅದ್ವೈತಿಗಳಂತೆ ಪ್ರತಿಬಿಂಬವಾದವನ್ನಾಗಲಿ ವಿವರ್ತವಾದವನ್ನಾಗಲಿ ಒಪ್ಪದೆ. ಬಿಂಬವಾದ ಅಂಶವಾದ ಅವಿಕೃತ ಪರಿಣಾಮವಾದಗಳನ್ನು ಒಪ್ಪಿದೆ. ಅದ್ವೈತ ಬ್ರಹ್ಮಯಾಯಿಯಲ್ಲ, ಶಕ್ತಿವಂತನಲ್ಲ ಶಿವಾದ್ವೈತ ಪರಶಿವ ಬ್ರಹ್ಮ ಶುದ್ಧ ಮಾಯಾವಂತ ಪರಾಶಕ್ತಿವಂತ! ''ಮಾಯಾಂತು ಪ್ರಕೃತಿಂ ವಿಂದ್ಯಾತ್ ಮಾಯಿನಂತು ಮಹೇಶ್ವರ:" ಎಂಬೀಶ್ರುತಿಮತದಂತೆ ಅಂಗಿಕರಿಸಲಾಗಿದೆ. ಪರಿಶುದ್ಧಮಾಯೆ ಅಥವಾ ಪರಶಕ್ತಿ ಪರಶಿವನಿಗೆ ಅವಿರಳ. ಅದ್ವೈತಿ ನಿಷ್ಕಾಮವಾದಿ; ಶಿವಾದ್ವೈತಿ ಸಹಜವಾದಿ. ಶಿವಾದ್ವೈತಸಿದ್ಧಾಂತದಲ್ಲಿ ಈ ಪ್ರಪಂಚ ಶಿವಶಕ್ತಿಸಮುತ್ಪನ್ನ! "ಗುಣತ್ರಯಾತ್ಮಿಕಾಶಕ್ತಿರ್ಬ್ರಹ್ಮ ನಿಷ್ಠಾ ಸನಾತನೀ|" "ಅತ್ಯಂತಗೂಢ ಚೈತನ್ಯಂ ಜಡಮುಚ್ಯತೇ" ಚೈತನ್ಯವಿಲ್ಲದ ಅಣುವಿಲ್ಲ ಜಗತ್ತಿನಲ್ಲಿ! ಶಿವಾದ್ವೈತದ್ದು ಪಿಂಡ ಜಿಜ್ಞಾಸೆ; ಪಿಂಡವಿಕಾಸ. ಸರ್ವತಂತ್ರಪ್ರಯೋಗವೆ ಶಿವಾದ್ವೈತ ಸಿದ್ಧಾಂತತತ್ತ್ವ! ಲಿಂಗಾಂಗಯೋಗ ತತ್ತ್ವ!

"ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಂ
ಯತ್ತಸ್ಯಧಾರಣಂ ಚಿತ್ತೇ ತದಾಂತರಮುದಾಹೃತಂ ।

ಶಿವಯೋಗಿ ಶಿವಾಚಾರ್ಯ ಶಿವಾನುಭಾವಿಯ
ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ಚಿದ್ರೂಪಂ ಹಿ ಪರಂತತ್ತ್ವಂ ಶಿವಾಖ್ಯಂ ವಿಶ್ವಕಾರಣಂ
ನಿರಸ್ತವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಂ ।
ಸತ್ತಾನಂದ ಪರಿಸ್ಫೂರ್ತಿಸಮುಲ್ಲಾಸಕಲಾಮಯಂ
ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿರುಪಾಸಿತಂ।

ಶಿವಾದ್ವೈತಸಿದ್ಧಾಂತದಲ್ಲಿ ಧಾರಣಪ್ರಧಾನ; ಪ್ರಥಮ. ಧ್ಯಾನ ಆ ಬಳಿಕ! ಶಿವಾದ್ವೈತಸಿದ್ಧಾಂತದ ಚಿಲ್ಲಿಂಗ ವಿಶ್ವಕಾರಣ. ವಿಶ್ವಕಾಲುಷ್ಯ ರಹಿತ. "ಪಶ್ಯಂತಿ ಹೃದಯೇ ಲಿಂಗಂ ಪರಮಾನಂದಲಕ್ಷಣಂ" ಅಂತೆಯೇ ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸಕಲಾಮಯ, ಅಪ್ರಮೇಯ. ಅನಿರ್ದೇಶ್ಯ ಆದರೂ ಮುಮುಕ್ಷುಗಳಿಂದ ಉಪಾಸ್ಯ. ಗುರುಕಾರುಣ್ಯವಶ್ಯ. ಕರಸ್ಥಲ ಸಂದೃಶ್ಯ.

ಅಗ್ನಿಹೋತ್ರಕ್ಕಿಂತ ಪಂಚಾಕ್ಷರ ಜಪಯಜ್ಞ ಕೋಟಿಪಾಲು ಮೇಲು. ಜಪ, ತಪ. ಕ್ರಿಯೆ,ಧ್ಯಾನ,ಜ್ಞಾನಕಈಯಜ್ಞ ಪಂಚಕಗಳು ಶಿವಯಜ್ಞವೆಂದು ಸಿದ್ಧಾಂತೀಕರಿಸಲಾಗಿದೆ. ದೃಕ್ಕ್ರಿಯಾತ್ಮಕ ಭಕ್ತಿ ಭಕ್ತನಿಗೆ ನಿರ್ಣೀತವಾಗಿದೆ. ಜ್ಞಾನಕ್ರಿಯಾತ್ಮಕ ಭಕ್ತಿಯು, ಶ್ರವಣ, ಕೀರ್ತನ, ಶಿವಸ್ಮರಣ,ಪಾದಸೇವನ, ಲಿಂಗಾರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂದು ನವವಿಧಭಕ್ತಿ ನಿರ್ದಿಷ್ಟವಾಗಿದೆ. ಭಕ್ತಿಮಾರ್ಗದಲ್ಲಿ ಅಧಮ–ಉತ್ತಮ ಎಂಬ ಭೇದವಿಲ್ಲ; ಅಂತ್ಯಜ ಅಗ್ರಜ ಎಂಬ ಭೇದವಿಲ್ಲ. ಶಿವಧ್ಯಾನನಿರತ ಮನವೇ ಮನ. ಶಿವನಾಮರತ ವಾಣಿಯೇವಾಣಿ. ಲಿಂಗಧಾರಣ ಮಾಡಿದ ಕಾಯವೇಕಾಯ. ಶಿವಲಿಂಗಾರ್ಚನ ಗುರುಸೇವೆಗಳಿಗಾಗಿ ಶ್ರಮಿಸುವ ಉದ್ಯಮವೇ ಉತ್ತಮ. ಸಮಾಜ ಕಲ್ಯಾಣಕ್ಕಾಗಿ ಮಾಡುವ ವೃತ್ತಿಯೇ ಸತ್ಯಶುದ್ಧಕಾಯಕ. ಷಡಕ್ಷರ ವಿದ್ಯಾವಂತನೇ ಸುಕವಿ. ಲಿಂಗಾರ್ಚನರತರಾದ ಸ್ತ್ರೀಯರಿಗೆ ಋತು ಸೂತಕಾದಿಗಳಿಲ್ಲ. ಶಿವಯಾತ್ರಿಕರಿಗೆ ಓಗರನೀಯುವುದೇ ದಾಸೋಹ. ಓಗರ ನೀರುಗಳ ದಾನವೇ ದಾನ. ಅಹಿಂಸೆಯೇ ಆತ್ಯಂತಿಕ ತಪ. ಶಿವಾಚಾರಾನು

ಷ್ಠಾನವೇ ಮಹಾನವೀಯತೆ. 'ಹಿತಮೇವ ಚರೇನ್ನಿತ್ಯಂ ಶರೀರೇಣ ಧನೇನ ಚ।' ದೇಹ-ಧನಗಳಿಂದ ಎಲ್ಲರಿಗೆ ಹಿತ ಮಾಡುವಿಕೆಯೇ ಮಹಾನಿಧಿ! ಶ್ರೀಗುರುವಿನಾಜ್ಞೆಯನ್ನು ಮೀರದೆ ತ್ರಿಕರಣದಿಂದ ಸೇವಿಸುವುದೇ ಶಿವನ ಸಾಕ್ಷಾತ್ಕಾರಸಿದ್ಧಿ! ಆಚಾರ್ಯನಿಗೆ ಅಧಿಕ ದೇವರಿಲ್ಲ. ಅಚಿರಲಿಂಗಕ್ಕಿಂತ ಚರ ಲಿಂಗ ಪರತರ! ಪಾದೋದ ಪ್ರಸಾದವೆ ಪರಮಾತ್ಮ! ವಿಶ್ವಾಧಿಕನೂ ವಿಶ್ವಾನುಗ್ರಹಕಾರಕನು ರುದ್ರನೆಂದು ದೃಢವಾಗಿ ಅರಿತು ರುದ್ರನಿಷ್ಠೆಯುಳ್ಳವನೇ ಮಾಹೇಶ್ವರಸ್ಥಲೀ! ನೇತಿವಾದಕ್ಕಿಂತ ನಿರಸನವಾದದಲ್ಲಿ ಪದಾರ್ಥಮೌಲ್ಯ ಇದೆ. ಮೌಲ್ಯದ ಮಾತಂತಿರಲಿ, ಅಸಲು ಅಸ್ತಿತ್ವವೇ ಇಲ್ಲ ವಿಷಯೇಂದ್ರಿಯ ಕಾಯಗಳಿಗೆ! ಪ್ರತಿ ಪದಾರ್ಥ ಅಥವಾ ವಸ್ತುವಿನಲ್ಲಿ ಗ್ರಾಹ್ಯಾಗ್ರಾಹ್ಯ ಅಂಶಗಳಿರುತ್ತವೆ. ಇವುಗಳಲ್ಲಿ ಅಗ್ರಾಹ್ಯಾಂಶವನ್ನು ಬಿಟ್ಟು ಗ್ರಾಹ್ಯಾಂಶವನ್ನು ಗ್ರಹಿಸುವಿಕೆಯೆ ನಿರಸನವಾದ. ಪೂಜ್ಯ ಪೂಜಕ, ಸ್ವಾಮಿಭೃತ್ಯ, ಗುರು ಶಿಷ್ಯ ಮುಂತಾದವುಗಳಲ್ಲಿ ಭೇದಭಾವ ಅಥವಾ ದ್ವಂದ್ವಭಾವವಿದ್ದು ಸಮರಸಭಾವದಲ್ಲಿ ಅಭೇದಭಾವ ಅಥವಾ ಅದ್ವೈತಭಾವವಿರುವುದೆ ಸಿದ್ಧಾಂತ! ಭೇದವನ್ನೊಪ್ಪಿದರೂ ಆತ್ಯಂತಿಕ ಭೇದವಲ್ಲ. ಸಂಯೋಗ ಭೇದವಲ್ಲ. ಚಿತ್ರಭಿತ್ತಿಯಂತೆ, ಮಣ್ಣುಮಡಕೆಯಂತೆ, ನೀರು ನೀರ್ತೆರೆಯಂತೆ, ತಂತುಪಟದಂತೆ, ಬಿತ್ತು ಮೊಳಕೆಯಂತೆ ಗುಣಗುಣಿಯಂತೆ ಶಿವಶಕ್ತಿಯಂತೆ ಬ್ರಹ್ಮ ಬ್ರಹ್ಮಾಂಡಸಂಬಂಧ: ಚರಾಚರ ಸಂಬಂಧ ಮತ್ತು ಪರಾಪರ ಸಂಬಂಧ. ಅದು ಸಮವಾಯ ಸಂಬಂಧವಲ್ಲದೆ ಸಂಯೋಗ ಸಂಬಂಧವಲ್ಲ. ಅರ್ಚನಾರಂಭದಲ್ಲಿ ಅಂಗಲಿಂಗಭಾವವಿದ್ದು ಅರ್ಚನಾನಂತ್ಯದಲ್ಲಿ ಅಂಗ ಲಿಂಗದಲ್ಲಿ ಅಖಂಡ ಭಾವವುಂಟಾಗುತ್ತದೆ. ಸಮರಸವಾಗಿ ಲಿಂಗ ಏಕೋಭಾವವಿರುತ್ತದೆ. ಅಂತೆಯೇ ಶಿವನು ಜಗನ್ಮಯನಾಗಿರುತ್ತಾನೆ, ಅಂತೆಯೇ ಚರಾಚರವು ಲಿಂಗ ಸ್ವರೂಪವಾಗಿರುತ್ತದೆ. ಇದು ಶಿವಾಚಾರ್ಯ ತತ್ತ್ವ, ಸಿದ್ಧಾಂತ. ಶರಣತತ್ತ್ವ ಇದಕ್ಕೆ ಭಿನ್ನ. ಇಲ್ಲಿ ಶರಣನೆಂದರೆ ಬಸವಣ್ಣ "— ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ." ಎಂದು ಬಸವಣ್ಣ ವಚಿಸುತ್ತಾನೆ. ಚರಾಚರವು ಅಂದರೆ ಸ್ಥಾವರ ಜಂಗಮವು ಲಿಂಗವೇ ಆಗಿರುವಾಗ ಅಥವಾ

ಲಿಂಗದಲ್ಲಿಯೇ ಲೀನವಾಗಿರುವಾಗ ಅಳಿವೆಂಬುದೆಲ್ಲಿ ? ಸ್ಥಾವರದ ಕಲ್ಪನೆಯೆಲ್ಲಿ ? ದೇವಾಲಯ ದೃಷ್ಟಿಯ ಹೊಸ ಹೊಳಹಿನ ಒಡಲಲ್ಲಿಯೇ ಕಟ್ಟಿರುಳು ಕವಿದು ಕಾಣಿಸಿಕೊಂಡರೆ ನಿರ್ದೋಷದ ನಿಲವೆಲ್ಲಿ? 'ಅಂಗಸತಿ ಲಿಂಗಪತಿ' ಎಂಬ ಸಂಪೂರ್ಣ ಷಟ್‌ಸ್ಥಲಗಳನ್ನು ಪ್ರತಿನಿಧಿಸುವ ಆಗಮಿಕ ನಿರೂಪಣೆಯನ್ನು ನಿಲ್ಲಿಸಿ"ಶರಣಸತಿ ಲಿಂಗಪತಿ" ಎಂಬ ಶರಣೈಕಸ್ಥಲಿಯನ್ನು ಸೀಮಿತಗೊಳಿಸುವ ಸಂಕುಚಿತ ಕಥನ ಸರಿಯೇ ?ಇಂತಹ ಹಲವು ಹತ್ತು ಏಕಪಕ್ಷೀಯ ನ್ಯೂನತೆಯ ವಿಚಾರಗಳಿಂದ ಶರಣ ಸಾಹಿತ್ಯದ ಮೇಲಿನ ನಂಬುಗೆ ನಿಶ್ಚಲಗೊಳ್ಳದೆ ಹೋಗುತ್ತಿದೆ. ಈಚೆಗೆ ಅರ್ಥವಿಲ್ಲದ ಸಂಕುಚಿತ ಶರಣವಾದಿಗಳು ಹೆಚ್ಚುತ್ತಿದ್ದಾರೆ ಸಂಪೂರ್ಣ ಸಿದ್ಧಾಂತವನ್ನರಿಯದೆ! ಸಂಪೂರ್ಣ ಕಾಯಕ ಮತ್ತು ದಾಸೋಹತತ್ತ್ವಗಳನ್ನು ತಿಳಿಯದೆ!! 'ಕಾಯಕವೇ ಕೈಲಾಸ' ಎಂಬುದೆತ್ತ! 'ಕಾಯಕವೇ ಕಳಾಚೈತನ್ಯ' ಎಂಬ ಯಾವ ಕೊರತೆಯಿಲ್ಲದ ಮೂಲ ಚೈತನ್ಯ ಬೋಧಕ ಶಿವಾಚಾರ್ಯರ ಲಕ್ಷಣವೆತ್ತ? 'ಅರಿದರೆ ಶರಣ ಮರೆದರೆ ಮಾನವ ಎಂಬಲ್ಲಿ ಶರಣ ಲಕ್ಷಣ ಏಕದೇಶಿಯ ಏಕಾಂಶಗಳಿಂದ ಕೂಡಿ ಜ್ಞಾನವೊಂದಿದ್ದರೆ ಸಾಕೆಂಬ ಕೇವಲಾದ್ವೈತದ ಹಾದಿಯನ್ನು ಹಿಡಿದಿಲ್ಲವೆ ? "ಆಚಿನೋತಿಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ। ಚೈತನ್ಯ ಸ್ವಯಮಾಚರತೇಯಸ್ತು ಸ ಆಚಾರ್ಯ ಇತಿಸ್ಮೃತಃ॥ ಅಖಂಡಂಯೇನ ವ್ಯಜ್ಯತೇ ಸರ್ವವಸ್ತುಷು। ಆತ್ಮಯೋಗ ಪ್ರಭಾವೇನ ಸ ಗುರುಃ ವಿಶ್ವಭಾಸಕಃ॥" ಈ ಸರ್ವಾಂಗೀಣ ದೃಷ್ಟಿಯುಳ್ಳ ಆಚಾರ್ಯ ಲಕ್ಷಣ ಅದೆಷ್ಟು ಉನ್ನತ, ಅದೆಷ್ಟು ಉದಾತ್ತ! ಶಾಸ್ತ್ರಾರ್ಥಗಳನ್ನು ನಿಯಮಬದ್ಧವಾದ ನಿರ್ಮಲವಾದ ವಿಜ್ಞಾನಾರ್ಥಗಳನ್ನು ಆಯ್ದು ಸಂಗ್ರಹಿಸಿ ತಾನು ಮೊದಲಾಚರಿಸಿ. ಉಳಿದವರನ್ನು ಆಚರಿಸುವಂತೆ ಮಾಡುವವನೇ ಆಚಾರ್ಯನು; ಮತ್ತು ಆಚಾರ್ಯನು ಆತ್ಮಯೋಗ ಪ್ರಭಾವದಿಂದ ಅಖಂಡಚೈತನ್ಯವನ್ನು ಸಮಸ್ತವಸ್ತುಗಳಲ್ಲಿ ಅರಿವಿನಾಚಾರದಿಂದ ಅಭಿವ್ಯಕ್ತಗೊಳಿಸುವ ಶ್ರೀಗುರುವೇ ವಿಶ್ವಭಾಸಕನು; ಆಚಾರ್ಯನ ಸರ್ವಾಂಗೀಣ ಚೈತನ್ಯಾತ್ಮಕಮಣಿಹ

ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ಆಚಾರ್ಯತ್ವದಲ್ಲಿಯೇ ಇದೆ. ಆಚಾರ್ಯನಿರುವುದು ಎಲ್ಲರಿಗಾಗಿ: ಶಿಕ್ಷಕನಿರುವುದು ವಿದ್ಯಾರ್ಥಿಗಳಿಗಾಗಿ; ಶರಣಸತಿಯಿರುವುದು ತನ್ನ ಪತಿಗಾಗಿ; ಪ್ರಾಣಲಿಂಗಸ್ಥಲದಿಂದ ಅಂತರ್ಮುಖಿಯಾದ ಶರಣ ಪತಿಯು ಐಕ್ಯಕ್ಕಾಗಿ ಇನ್ನೂ ಮತ್ತೂ ಮಿಗಿಲಾಗಿ ಅಂತರ್ಮುಖಿಯಾಗಿರುತ್ತಾನೆ. ನಿರ್ಧೇಹಿ ನಿರ್ಭಾವಿಯಾಗಿರುತ್ತಾನೆ ಬಾಹ್ಯಭಾವವಿರಹಿತನಾಗಿರುತ್ತಾನೆ ಭಾವವಾಗಲಿ ಭಾವನೆಗಳಾಗಲಿ ಆತನಲ್ಲಿ ಇರುವುದೇ ಇಲ್ಲ. ಇದ್ದರೆ ಐಕ್ಯಸ್ಥಲನ ಸಮರಸ ಅಳವಡುವುದಿಲ್ಲ. ಐಕ್ಯವಾಗುವ ಕ್ರಿಯೆಯೊಂದೇ ಶರಣನಿಗೆ ಮಿಸಲು. ಅದು ಮಾರ್ಗಕ್ರಿಯೆಯಲ್ಲ. ಮೀರಿದ ಕ್ರಿಯೆ! ಅದು ಹೊರಗಿನದಲ್ಲ.: ಹೊರಕ್ಕೆ ಬರುವುದಲ್ಲ. ಬಂದರೂ ಉಪಯುಕ್ತವಲ್ಲ ಎಲ್ಲರಿಗೆ! ಬೋಧ್ಯ ಬೋಧಕ ಭಾವವಲ್ಲಿ ಇಲ್ಲ. ಶರಣನ ತಾಪಸನಿರಸನಕ್ಕೆ ಗುರು ಬೇಕೇ ಬೇಕು. ಇಲ್ಲವಾದಲ್ಲಿ ಶರಣನಿಗೆ ಪ್ರಸಾದಲಿಂಗದ ನಿರ್ದೇಶವುಂಟಾಗದು. ಶೀಲ ಸಂಪಾದನವಾಗದು. ಐಕ್ಯ ಶಕ್ತಿ ಅಳವಡದು. ಅಂತ: ಶಕ್ತಿ ಅಳವಡದು.

"ಶಿಷ್ಯಾಣಾಂ ಹೃದಯಾಲೇಖ್ಯಂ ಪ್ರದ್ಯೋತಯತಿ ಯಃ ಸ್ವಯಂ ।
ಜ್ಞಾನದೀಪಿಕಯಾ ತೇನ ಗುರುಣಾ ಕ: ಸಮೋ ಭವೇತ್ ॥?
ಯತ್ಸೂಕ್ತಿದರ್ಪಣಾಭೋಗೇ ನಿರ್ಮಲೇ ದೃಶ್ಯತೇ ಸದಾ ।
ಮೋಕ್ಷಶ್ರೀರ್ಬಿಂಬರೂಪೇಣ ಸ ಗುರುರ್ಭವತಾರಕಃ ॥
ಸರ್ವಾರ್ಥಸಾಧಕ ಜ್ಞಾನ ವಿಶೇಷಾವೇಶತತ್ಪರಃ ।
ಜ್ಞಾನಾಚಾರ್ಯಃ ಸಮಸ್ತಾನಾಮನುಗ್ರಹಕರ: ಶಿವ: ॥

ಶಿಷ್ಯರ ಅಂತಸ್ತಮಸ್ಸನ್ನು ಕಳೆವ ಅನನ್ಯ ಪ್ರಜ್ಞಾನದೀಪವುಳ್ಳಾತ ಗುರುದೇವ. ಅದರಿಂದ ತಮಸ್ಸನ್ನು ತೊಡೆದು ಹೃದಯುವ ಸತ್ಯಶಿವಸುಂದರ ಚಿಲ್ಲಿಂಗಮೂರ್ತಿಯನ್ನು ಬೆಳ್ಳಂಬೆಳಗಿಸಿ ತೋರಿಸುತ್ತಾನೆ. ಶಿವಾಚಾರ್ಯನಸೂಕ್ತಿಧಾರೆಯಲ್ಲಿ ಅಂತಹಪಶಕ್ತಿಯಿರುತ್ತದೆ ಆ ಸೂಕ್ತಿಧಾರೆ ಅದೊಂದು ದಿವ್ಯದೀಪ್ತ ದರ್ಪಣ; ವಿಸ್ತಾರ ದರ್ಪಣ. ಜೀವನುಕ್ತಿಯ ಪ್ರತಿಬಿಂಬವನ್ನಲ್ಲ. ಬಿಂಬವನ್ನೆ

ತೋರಿಸಿ ಸಾಕ್ಷಾತ್ಕರಿಸಿ ಭವಸಾಗರವನ್ನು ದಾಟಿಸುವ ಶಕ್ತಿಯುಳ್ಳ ಗುರು ದರ್ಪಣ. ಗುರು ಚೈತನ್ಯದರ್ಪಣ. ಸರ್ವರಿಗೆ ಸರ್ವಾರ್ಥ ಸಂಪಾದನೆ ಶಕ್ತಿ ಯುಕ್ತ ಚೈತನ್ಯದರ್ಪಣ. ಸಮಸ್ತರ ಅನುಗ್ರಹಕಾರಕ ಸಾಕ್ಷಾತ್ ಶಿವಸ್ವರೂಪ ಗುರುದರ್ಪಣ.

ಗುರುದತ್ತ ಕ್ರಿಯಾದೀಕ್ಷೆಯೆ ಸತ್, ಮಂತ್ರದೀಕ್ಷೆಯೇ ಚಿತ್; ವೇಧಾ ದೀಕ್ಷೆಯೆ ಆನಂದ. ಇವುಗಳಿಂದ ಶಿಷ್ಯನ ತ್ರಿವಿಧ ತನುಗಳನ್ನು ತ್ರಿವಿಧಾಂಗ ಗಳನ್ನಾಗಿಸಿ, ಆ ತ್ರಿವಿಧಾಂಗಗಳಲ್ಲಿ ತ್ರಿವಿಧಲಿಂಗಗಳನ್ನು ಶಿವಾಚಾರ್ಯನು ಪ್ರತಿಷ್ಠಿಸಿ ಪ್ರಕಾಶಪಡಿಸುತ್ತಾನೆ. ಇಷ್ಟ-ಪ್ರಾಣ-ಭಾವಲಿಂಗಗಳೇ ಸತ್, ಚಿತ್, ಆನಂದ ಸ್ವರೂಪಗಳು. ಇವುಗಳಿಂದ ಗುರುಭಕ್ತನ ತ್ರಿವಿಧಾಂಗಗಳು ಸಚ್ಚಿದಾನಂದ ಸ್ವರೂಪಗಳಾಗಿ ಶೋಭೆಗೊಳ್ಳುತ್ತವೆ. ಇಂತಹ ಶ್ರೀಗುರುವೆ ಈ ವಿಶ್ವದಲ್ಲಿ ಇನ್ನಾರು ಸಮವಾಗುತ್ತಾರೆ ? ಗುರುದೃಷ್ಟಿ ಸದ್ರೂಪ ವಾದರೆ ಗುರುವಾಣಿ ಚಿದ್ರೂಪವಾಗಿ ಮಂತ್ರಮಯವಾಗಿರುತ್ತದೆ. ಗುರುವಿನ ಘನಮನ ಆನಂದಮಯವಾಗಿ ಪರಮ ಪ್ರಸಾದವಾಗಿರುತ್ತದೆ. ಪ್ರಸನ್ನತೆಯು ತರುತ್ತದೆ. ಪರಮ ಪರಿಣಾಮವನ್ನುಂಟು ಮಾಡು ತ್ತದೆ. ಇನ್ನೇನಾಗಬೇಕು ? ಇದಲ್ಲವೇ ಶಿವಾಚಾರ್ಯನ ಸರ್ವಾಂಗೀಣ ಸೈದ್ಧಾಂತಕ ಸಮ್ಯಕ್ ದೃಷ್ಟಿ! ಇದರಿಂದ ಯಾವ ಕೊರತೆಯಿಲ್ಲದ ಸಂತುಷ್ಟಿ! ಹೀಗೆ ಮೂಲಭೂತ ಮಹಾಸತ್ಯವಸ್ತುವನ್ನು ಶಿಷ್ಯ ಸಮೂಹಕ್ಕೆ ಇಡೀ ಸಮಾಜಕ್ಕೆ ಸುಪ್ರಸಂಗ ಒದಗಿದಲ್ಲಿ ಸಾರ್ವಜನಿಕಕ್ಕೆ ಕರು ಣಿಸಿ ಸತ್ಕ್ರಿಯೆಯಲ್ಲಿ ಸಮ್ಯಗ್‌ಜ್ಞಾನದಲ್ಲಿ ಸ್ವಾನುಭೂತಿಯಲ್ಲಿ ಸರ್ವರನ್ನು ಪ್ರಗತಿಶೀಲವಾಗಿ ನೂರೊಂದು ನೆಲೆಗಳೆಂಬ ಹಂತ ಹಂತಗಳಲ್ಲಿ ಮೇಲು ಮೇಲಕ್ಕೆ ಹತ್ತಿಸಿ ಭಾವೈಕ್ಯವನ್ನು ವಿಶ್ವೈಕ್ಯವನ್ನು ಸಾಧಿಸಿದ ಸಾಧಿಸುವ ಸರ್ವಾಂಗೀಣ ಸೈದ್ಧಾಂತಕ ಸಮ್ಯಕ್‌ದೃಷ್ಟಿ ಅಪ್ರಾಕೃತಿಕ ಸುಸೃಷ್ಟಿ ಶಿವಾ ಚಾರ್ಯರದಲ್ಲದೆ ಮತ್ತಾರದು ? ಧರ್ಮ ದರ್ಶನಗಳನ್ನು ವೈಯಕ್ತಿಕವಾಗಿ ಸಾಮಾಜಿಕವಾಗಿ ಸಾರ್ವಜನಿಕವಾಗಿಯೂ ರೂಪಿಸಿದ ರೂಪಿಸುವ ವಿಶಾಲ ಮನೋಭಾವ ವಿಕಾಸದೃಷ್ಟಿ ಶಿವಾಚಾರ್ಯರದು. ನಂ ವೀರಶೈವಸದೃಶಂ ಮತ

## ಶಿವಯೋಗಿ ಶಿವಾಚಾರ್ಯ ಶಿವಾನುಭವಿಯ
## ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ಮಸ್ತಿ ಜಗತ್ರಯೇ' ಎಂದು, 'ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವ ಕಾರಣಂ' ಎಂದು, 'ಸರ್ವಂ ಲಿಂಗಮಯಂ ಜಗತ್' ಎಂದು ಮುಂತಾಗಿ ನಿರೂಪಿಸಿದವರು ಆದ್ಯ ಶಿವಾಚಾರ್ಯರು. ಲಿಂಗವನ್ನು ಸರ್ವಾಂಗೀಣ ಪ್ರಗತಿ ಜೀವನಕ್ಕೆ ಸಂಯೋಜಿಸಿದವರು ಶಿವಾಚಾರ್ಯರು. ಆಂಶಿಕ ಸತ್ಯವನ್ನಾಗಿಸಿದೆ ಸಂಪೂರ್ಣ ಸತ್ಯವನ್ನಾಗಿಸಿದವರು ಆದ್ಯ ಶಿವಾಚಾರ್ಯರು. ಅವರು ಜೀವನ ಸಿದ್ಧಾಂತವಾದ ಷಟ್‌ಸ್ಥಲ ಚಕ್ರವರ್ತಿಗಳು ಅಥವಾ ಬ್ರಹ್ಮಗಳು ಎಂಬುದಾಗಿ ಹೇಳಿಸಿಕೊಳ್ಳುವಲ್ಲಿದೆ ಶಿವಾಚಾರ್ಯರ ಜೀವನ ಮೌಲ್ಯ. ಮಾನವೀಯ ಮೌಲ್ಯಗಳನ್ನು ಮೊಮೊದಲು ಕಂಡು, ಅವನ್ನು ಉಪಯೋಗ ಪ್ರಯೋಗ ಗಗಳ ಮುಖಾಂತರ ಎತ್ತಿ ಹಿಡಿದ ಸರ್ವಾಂಗೀಣ ಸಿದ್ಧಾಂತಮಹಂತರು.

ಆದ್ಯ ಶಿವಾಚಾರ್ಯರು ಆವಿಷ್ಕರಿಸಿದ ಷಟ್‌ಸ್ಥಲ ರೂಪ ಜೀವನ ಸಿದ್ಧಾಂತದಲ್ಲಿ ಆಧಿಭೌತಿಕ ಆಧ್ಯಾತ್ಮಿಕ ಆಧಿದೈವಿಕ ಆಚಾರ ವಿಚಾರಗಳಿವೆ. ಅವಧಾನ ಅನುಭೂತಿಗಳಿವೆ. ವೈಜ್ಞಾನಿಕತೆಯಿದೆ. ಅವರ ಭೌತ-ಅಭೌತ ವಿಜ್ಞಾನ ಮಹಾಜ್ಞಾನಗಳು ಚೈತನ್ಯಪೂರ್ಣವಾಗಿವೆ. ಸಾರ್ವಕಾಲಿಕವಾಗಿವೆ. ಬುದ್ಧಿಭಾವಗಳೆರಡಕ್ಕೂ ಸಂಮತವಾಗಿವೆ. ಆತ್ಮನಿಷ್ಠವೂ ಆಗಿವೆ. ಸತ್ಯಕ್ಕೆ ಸಮಾಜಕ್ಕೆ ಅಪಚಾರವಾಗದಂತಿವೆ. ಷಟ್‌ಸ್ಥಲದಲ್ಲಿ ಶಿವದೇವರ ಅಂದರೆ ಲಿಂಗ-ಅಂಗರ ಸಮ್ಯಕ್‌ಜ್ಞಾನ ಸಮ್ಯಕ್‌ದರ್ಶನಗಳಾಗುತ್ತವೆ. ಬುದ್ಧಿ ನಿಷ್ಠ ಚಿಂತನ, ಭಾವನಿಷ್ಠ ಸಂವೇದನ, ಪೂರ್ಣ ಪರಾಹಂತೆಯು ಸಂಪಾದನ ಲಭಿಸಿ ಲೋಭ ಮೋಹಾದಿಗಳು ಮಾಯವಾಗುತ್ತವೆ. ಕೇವಲ ಸಾಂಪ್ರದಾಯಿಕ ಧರ್ಮ ದರ್ಶನಗಳಿಗೆ ಮನ ಮಾರಿ ಹೋಗದೆ ತಮ್ಮ ಸ್ವಾನುಭವದ ಸತ್ಯ ಪ್ರಕಾಶವನ್ನು ಅಂದರೆ ಸಮ್ಯಕ್ ಸಂವಿತ್ ಸ್ಫೂರ್ತಿಯನ್ನು ತುಂಬಿ ನಿರಂತರ ಬೆಳ್ಳಂ ಬೆಳಗಿಸಿದ್ದಾರೆ. ಮತ್ತೆ ಮತ್ತೊಬ್ಬರಿಂದ ತುಂಬಬೇಕಾದುದೇನೂ ಇರುವುದಿಲ್ಲ. ಇರಲು ಅಲ್ಲಿ ಅವಕಾಶವೂ ಇಲ್ಲ, ಇಂತಾಗು ಮಾಡಿದುದೆ ಚಿರಂತನ ಮಹಂತ ಸಿದ್ಧಾಂತ ! ಈ ಮಹಾ ಸಿದ್ಧಾಂತ ಸ್ರಷ್ಟಾರರಂ ದ್ರಷ್ಟಾರರಂ ಶಿವಾಚಾರ್ಯರು, ಇದನ್ನೆಲ್ಲ ಇಮ್ಮಡಿ ಮುಮ್ಮಡಿ ನೂರ್ಮಡಿ ಇಮ್ಮಾಗಿ

## ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ತಿಳಿಸಿಕೊಡಬಲ್ಲುದು ಸರ್ವಾಗಮಸಾರವಾದ ಸ್ವಾನುಭೂತಿಯಿಂದ ರೇಣುಕಾಗಮವೆನಿಸಿದ ಮತ್ತು ಸಮಾಜದ ಏಕೈಕ ಧರ್ಮಗ್ರಂಥವಾದ ಸುಪ್ರಸಿದ್ಧವಾದ 'ಸಿದ್ಧಾಂತ ಶಿಖಾಮಣಿ' ಕಲಾಕೃತಿಯು. ಅದು ಶಿವಾದ್ವೈತ ಸಿದ್ಧಾಂತ ಸಚ್ಚಿಜ್ಜ್ಯೋತಿಯು. ಅದು ಪ್ರಾಚೀನ ಶಿವಾಗಮಗಳಿಗಿಂತ ಈಚಿನ ವಚನಗಳಿಗಿಂತ ಪರಿಪಕ್ವವಾಗಿ ಪ್ರಬುದ್ಧವಾಗಿ ಪ್ರತಿಬೋಧಿಸಬಲ್ಲುದು. ಆದರ ಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮ ಚಿದಾನಂದ ಪರಾಕಾಶ ಶಿವಾನುಭವ ಯೋಗದಿಂದಲೂ ಐತಿಹಾಸಿಕ ದೃಷ್ಟಿಕೋನದಿಂದಲೂ ಸತ್ಯ ಶಿವ ಸೌಂದರ್ಯ ಸ್ವರೂಪವಾಗಿ ಚಿತ್ರಿಸಿದ್ದಾರೆ. ಸೈದ್ಧಾಂತಿಕವಾಗಿ ಸೂತ್ರೀಕರಿಸಿದ್ದಾರೆ. ಅದನ್ನು ಆಳವಾಗಿ ಅಧ್ಯಯನ ಮಾಡಿದವರಿಗೆ ನಮ್ಮೀ ಪ್ರಸ್ತಾಪದ ವಾಸ್ತವಿಕತೆಯ ಅರಿವಾಗದಿರದು. ಅನುಭವಾಗದಿರದು. ಆತ್ಮೀಯ ಪರಿಸ್ಫೂರ್ತಿ ಉನ್ಮೇಷವಾಗದಿರದು. ಆದರ ಆ ಮಾನವೀಯ ಮನೀಕ್ಷೆವನದಟ್ಟಾಗದಿರದು. ವ್ಯಷ್ಟಿಸಮಷ್ಟಿ ಭಾವಗಳೆರಡನ್ನು ಬೋಧಿಸುವ ಅಂಗಲಿಂಗಗಳಸಂವೇದನಾತ್ಮಕ ಸಮ್ಯಕ್ ಪರಾಮರ್ಶದಲ್ಲಿ ಯಾದ ಕಿಂಚಿತ್ ಕೊರತೆಯನ್ನು ಕಾಣಲಾಗುವುದಿಲ್ಲ ಪ್ರತಿಯಾಗಿ ಪರಿಪೂರ್ಣದ ಉತ್ತುಂಗಶಿಖರಕ್ಕೇರಲಾಗುತ್ತದೆ. ಗ್ರಂಥಕಾರನೇ ಗ್ರಥಿಸಿದಂತೆ "ಶೂನ್ಯೇಚಿದಂಬರೇ ಸ್ಥಾನೇ ದೂರೇವಾಙ್ಮನ ಸಾಧ್ವನಃ । ವಿಲೀನಾತ್ಮಾ ಮಾಹಾಯೋಗೀ ಕೇನ ಕಿಂವಾsಪಿ ಭಾವಯೇತ್ ?॥", ಎಂದುಉಗ್ಗಡಿಸದೆ ಬಿಡುವಂತಿಲ್ಲ. ಆ ಚಿದಂಬರ ಅದೇನು ಎತ್ತರ ? ಅದೆನಿತು ಬಿತ್ತರ ? ಅದು ಪರಿಪೂರ್ಣ ನಿಲವು. ಅದು ವಾಙ್ಮನಗಳಿಗೆ ಬಹುದೂರ ! ಅಪಾರ !! ಅದರಲ್ಲಿ ವಿಲೀನ ಚೇತನನಾದ ಮಹಾಯೋಗಿಯು ಯಾವುದರಿಂದ ಏನನ್ನು ಭಾವಿಸಬೇಕಾಗಿರುತ್ತದೆ ಆ ಮಹಾಯೋಗಿಯು ಭವಾತೀತಯೋಗಿಯಾಗಿರುವಾಗ ಭಾವಿಸುವುದೇನನ್ನು? ಭಾಷಿಸುವುದೇನನ್ನು?

ಆ ಬಗೆಯಲ್ಲಿ ಬೆಳೆದುಕೊಂಡು ಬೆಳಗಕಂಡು ನೀಳ ನಿಲವಿನಲ್ಲಿ ಪಿಂಡಾಂಡದ ಚಿದಂಬರದಲ್ಲಿ ನೆಲೆ ನಿಂತಿದೆ. ಆದ್ಯ ಶಿವಾಚಾರ್ಯರ ಸಾಮಾಜಿಕ

## ಶಿವಯೋಗಿ ಶಿವಾಚಾರ್ಯ ಶಿವಾನುಭಾವಿಯು ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿ !

ಸಾಂಸ್ಕೃತಿಕ ಸೈದ್ಧಾಂತಕ ಸಮ್ಯಕ್ ದೃಷ್ಟಿಯ ನಿಲುವು- ಚಿದಾನಂದ ಪರಾಕಾಶ ಶಿವಾನುಭವಯೋಗವುಳ್ಳ ಶಿವಾಚಾರ್ಯರ ನಿತ್ಯ ಪೂರ್ಣಾಖಂಡಗರ್ಭದಿಂದ ಆವಿರ್ಭವಿಸಿದ ಪ್ರಸಿದ್ಧ ಪ್ರಬುದ್ಧ 'ಸಿದ್ಧಾಂತ ಶಿಖಾಮಣಿಯು ಚಿದಾನಂದ ಪರಾಕಾಶ ಶಿವಾನುಭಾವದಿಂದ ಬರೆದು ಸಾರ್ವಕಾಲಿಕ ಬಹು ಬೆಲೆಬಾಳುವ ನೆಲೆ ನಿಲ್ಲುವ ಕಳೆಗೊಳ್ಳುವ ದಿವ್ಯ ಚಿಂತಾಮಣಿಯಾಗಿ ಹೊಮ್ಮಿದೆ. ಚಿಮ್ಮುತಿದೆ ಚಿರಂತನವಾಗಿ ಚಿದಾನಂದಾಮೃತವನು. ಬ್ರಹ್ಮಾಂಡವನ್ನೆ ಭಾಂಡ ಭಾಜನಸ್ಥಲವನ್ನಾಗಿಸಿ ಅದರಲ್ಲಿ ವಿಶ್ವ ವಸ್ತು ಪ್ರಕಾಶಿನಿಯಾಗಿ ಸರ್ವತೋಮುಖಿಯಾಗಿ ವಿಮರ್ಶಾಖ್ಯ ಪರಾಶಕ್ತಿಯಾಗಿ, "ಪರಾಹಂತಾ ಸಮಾವೇಶ ಪರಿಪೂರ್ಣ ವಿಮರ್ಶವಾನ್ । ಸರ್ವಜ್ಞಃ ಸರ್ವಗಃ ಸಾಕ್ಷೀ ಸರ್ವಕರ್ತಾ ಮಹೇಶ್ವರಃ ॥" ಸ್ವರೂಪವಾಗಿ ಸಾರ್ವಕಾಲಿಕ ಸತ್ತೆಯಾಗಿ ಶೋಭಿಸುತ್ತದೆ. ಅದಿರುಪವರೆವಿಗೂ ಶಿ. ಶಿವಾಚಾರ್ಯನ ಸರ್ವಾಂಗೀಣ ಸೈದ್ಧಾಂತಿಕ ಸಮ್ಯಕ್ ದೃಷ್ಟಿದೀಪಿಸುತ್ತದೆ. ಭಕ್ತ, ಮಾಹೇಶ. ಪ್ರಸಾದಿ, ಪ್ರಾಣಲಿಂಗಿ, ಶರಣ. ಐಕ್ಯ–ಇವು ನಿರುಗೆಯ ಮೇಲಿನ ನಿರುಗೆ ! ಇವನ್ನೆಲ್ಲ ಹಾಕಿದಾತನು, ಹಾಕಿ ತೊಟ್ಟಾತನು ಷಟ್‌ಸ್ಥಲಬ್ರಹ್ಮ (ಚಕ್ರವರ್ತಿ) ಶಿವಾಚಾರ್ಯನು, ಸೀಮಿತದ ವ್ಯಕ್ತಿತ್ವವನ್ನು ತನ್ನ ಸಾಮಾಜಿಕ ಸಿದ್ಧಾಂತದ ಮಾಧ್ಯಮದಲ್ಲಿ ಅಸೀಮಿತ ಪ್ರಗತಿಗೆ ಒಯ್ಯಬಲ್ಲ ಶಿವಾಚಾರ್ಯ !



# ವಿಮರ್ಶೆ ಶಕ್ತಿ–ವಿಶಿಷ್ಟ ಸತ್ಕಲೆ !

ಮಾನವ ಜೀವನದ ಮತ್ತು ಮರ್ತ್ಯಲೋಕದ ಆದ್ಯಂತ ಅಂದರೆ ಸೃಷ್ಟಿ ಸ್ಥಿತಿ ಲಯ (ಹುಟ್ಟುವಿಕೆ–ಇರುವಿಕೆ–ಅಡಗುವಿಕೆ) ಗಳ ಗುಣದೋಷ ಗಳನ್ನು ಪರಾಮರ್ಶಿಸಿ–ಪರೀಕ್ಷಿಸಿ ತೋರುವುದೆ ವಿಮರ್ಶೆಯು.

"ಬ್ರಹ್ಮಾಂಡ ಶತಕೋಟೀನಾಂ ಸರ್ಗಸ್ಥಿಲಯಾನ್ ಪ್ರತಿ।
ಸ್ಥಾನಭೂತೋ ವಿಮರ್ಶೋಯಸ್ತದ್ಭಾಂಡಸ್ಥಲಮುಚ್ಯತೇ॥"

–ರೇ.ಗೀತೆ

ನಮ್ಮ ಮೇಲಿನ ಮಾತಿಗೆ ಸತ್ಯ ಸಾಕ್ಷಿಯಾಗಿ ನಿಂತಿದೆ ಈ ರೇಣುಕ ಗೀತೆಯ ನಿರುಕ್ತಿ! ಸರ್ಗ ಸ್ಥಿತಿಲಯಗಳಿಗೆ ಸ್ಥಾನ ಭೂತ (ಕಾರಣ) ಶಕ್ತಿ ! ಇದುವೇ ಸರ್ವಾಧಾರ ಸುಧಾಸೂಕ್ತಿ! ಇದುವೆ ಈ ವಿಮರ್ಶೆಯೆ ಭಾಂಡ ಸ್ಥಲ. ಶತಕೋಟಿ ಬ್ರಹ್ಮಾಂಡಗಳಿಗೆ ಆಶ್ರಯಪಾತ್ರ ಅಥವಾ ಸ್ಥಾನ. ಜಾಗತಿಕ ಜೀವನದ ಮತ್ತು ಸಂಸ್ಕೃತಿಯ ಮೂಲಶಕ್ತಿ; ಮೌಲ್ಯಶಕ್ತಿ.

**ವಿಮರ್ಶಾ ಶಕ್ತಿ :**

"ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವೋದ್ಭಾಸನಕಾರಿಣೀ ।
ಸಾಕ್ಷಿಣೀ ಸರ್ವತತ್ತ್ವಾನಾಂ ಸಮಿಂಧೇ ಸರ್ವತೋಮುಖೀ॥"

–ರೇ. ಗೀತೆ

**ವಿಮರ್ಶಾಮಯಿ ಕಲೆ :**

"ವಿಶ್ವ ಯತ್ರಲಯಂ ಯಾತಿ ವಿಭಾತ್ಯಾತ್ಮಾ ಚಿದಾಕೃತಿಃ।
ಸದಾನಂದಮಯಃ ಸಾಕ್ಷಾತ್ ಸಾ ವಿಮರ್ಶಾಮಯೀ ಕಲಾ।"–ರೆ.ಗೀ.

ವಿಮರ್ಶೆಯು ಕಾರಣವಾಗಿ ಶಕ್ತಿ (ಕಳೆ) ಶಕ್ತಿಯೆನಿಸುತ್ತದೆ. ಕಾರ್ಯ ವಾಗಿ ಕಲೆಯೆನಿಸುತ್ತದೆ. ಶಿ. ಶಿವಾಚಾರ್ಯನ ಈ ಪರಾಮರ್ಶೆಯು ಅತ್ಯಂತ ಗಂಭೀರವಾಗಿದೆ; ಗಮನೀಯವಾಗಿದೆ.

ವಿಮರ್ಶೆ ಪ್ರಾಕೃತಿಕ, ಪ್ರಾಜ್ಞಿಕ ಎಂದು ಇಬ್ಬಗೆ! ಪ್ರಾಕೃತಿಕ ವಿಮರ್ಶೆಗೆ ಪರಾಶಕ್ತಿ ಮೂಲ; ಪ್ರಾಜ್ಞಿಕವಿಮರ್ಶೆಗೆ ಬುದ್ಧಿಕುಶಲತೆ ಮೂಲ. ಪರಾಶಕ್ತಿ ಮೂಲವಾದ ಈ ಪ್ರಕೃತಿ ವಿಮರ್ಶಾಶಕ್ತಿ ವಿಶ್ವೋದ್ಭಾಸನಕಾರಿಣಿಯಾಗಿ ಸರ್ವತತ್ತ್ವಗಳಿಗೆ ಸಾಕ್ಷಿಣಿಯಾಗಿ ಜ್ಯೋತಿಯಂತೆ ಸರ್ವತೋಮುಖಿಯಾಗಿರುತ್ತದೆ. ಪ್ರಾಕೃತಿಕ ವಿಮರ್ಶಾಶಕ್ತಿಯಿಲ್ಲವಾದರೆ ಈ ವಿಶ್ವದ ನಾನಾ ವಸ್ತುಗಳ ನಾನಾ ಪ್ರಾಣಿಗಳ ನಾನಾ ಸಂಪತ್ತುಗಳ ಸೃಷ್ಟಿಯಾಗದು.

ಮೂವತ್ತಾರು ತತ್ತ್ವಗಳು ಮೂಡಿಬಾರವು. ವಿಮರ್ಶಾತ್ಮಕ ಆ ಪರಾಶಕ್ತಿಯದು ಪ್ರತಿಭೆಯಿಂದ ಕೂಡಿದ ಸರ್ವತೋಮುಖ ಸಂಪನ್ನವಾದುದು. ದಿಟಕ್ಕೂ ಅದೊಂದು ಅತ್ಯಂತ ಮಹಾಶಕ್ತಿ! ವಿಶ್ವವನ್ನೆಲ್ಲ ಒಳಗೊಳ್ಳುವ. ಹೊರ ಹೊಮ್ಮಿಸುವ ಸಾಮರ್ಥ್ಯವುಳ್ಳ ಅದರ ಆಶ್ರಯದಲ್ಲಿ ನಿತ್ಯಾನಂದಮಯನಾದ ಚಿಚ್ಚೇತನನು ನಾನಾ ನಾಮರೂಪಾತ್ಮಕನಾಗಿ ವಿಶ್ವದಲ್ಲಿ ವಿಭಾಸಿಸುತ್ತಾನೆ–ದೃಶ್ಯರೂಪನಾಗಿ! ಇಂತಾದಾಗ ಆ ವಿಮರ್ಶಾ ಪರಾಶಕ್ತಿಯೇ ಅಪರ ವಿಮರ್ಶಾಮಯಿ ಕಲೆಯಾಗಿ ಕಾಣಿಸಿಕೊಳ್ಳುತ್ತದೆ. ಈ ಕಲೆಯೆ ವಿಶ್ವಕ್ಕೆ ಭಾಂಡವೆದೆನಿಸುತ್ತದೆ,

ವಿಮರ್ಶಾತ್ಮಕ ಆ ಪರಾಶಕ್ತಿಯಿಂದ ಪರಶಿವನು ವಿಮರ್ಶವಂತನೆನಿಸುತ್ತಾನೆ; ಸರ್ವಜ್ಞನು ಸರ್ವಕರ್ತನು ಸರ್ವವ್ಯಾಪ್ತನು ಆಗುತ್ತಾನೆಂಬುದನ್ನು ಪರಾಕಾಶ ಶಿವಾನುಭವಯೋಗಿಯಾದ ಶಿವಯೋಗಿ ಶಿವಾಚಾರ್ಯನ ಪರಾಮರ್ಶಪ್ರತಿಭಾನ್ವಿತ ವಾಣಿಯಲ್ಲಿಯೇ ಆಲಿಸಿರಿ;

"ಪರಾಹಂತಾ ಸಮಾವೇಶ ಪರಿಪೂರ್ಣ ವಿಮರ್ಶವಾನ್ ।
ಸರ್ವಜ್ಞಃಸರ್ವಗಃ ಸಾಕ್ಷೀ ಸರ್ವಕರ್ತಾ ಮಹೇಶ್ವರ: ॥
ವಿಶ್ವಾಧಾರಂ ಮಹಾಸಂವಿತ್ಪ್ರಕಾಶ ಪರಿಪೂರಿತಂ।
ಪರಾಹಂತಾಮಯಂ ಪ್ರಾಹುರ್ವಿಮರ್ಶಂ ಪರಮಾತ್ಮನ:॥
ವಿಮರ್ಶಭಾಂಡವಿನ್ಯಸ್ತ ವಿಶ್ವತತ್ತ್ವವಿಜೃಂಭಣಃ।
ಅನನ್ಯಮುಖ ಸಂಪ್ರೇಕ್ಷೀ ಮುಕ್ತ: ಸ್ವಾತ್ಮನಿ ತಿಷ್ಠತಿ॥" -ರೇ. ಗೀತೆ

ಪರಿಪೂರ್ಣ ವಿಮರ್ಶಾಪ್ರವೀಣತನು ಪರಮಾತ್ಮನೊಬ್ಬನೆ! ಏಕೆಂದರೆ ಆತನು ಪೂರ್ಣಾಹಂಭಾವದಿಂದ ಕೂಡಿರುತ್ತಾನೆ. ಅಂದರೆ ವಿಶ್ವಾತ್ಮನಾಗಿರುತ್ತಾನೆಂದರ್ಥ! ಚೂರ್ಣಾತ್ಮರೂ ಚೂರ್ಣಾಹಂಕಾರಿಗಳೂ ಆದ ನಾವೆಲ್ಲ ಆಂಶಿಕ ವಿಮರ್ಶಕರು. ಆತನು ಪರಾಶಕ್ತಿರೂಪ ವಿಮರ್ಶಕನಾಗಿ ಸರ್ವಜ್ಞನು. ನಾವು ಅಪರಾಶಕ್ತಿ ಅಂದರೆ ಪ್ರಕೃತಿರೂಪ ವಿಮರ್ಶಕರಾಗಿ ಅಲ್ಪಜ್ಞರು. ಆತನು ಸರ್ವಕರ್ತೃ, ನಾವು ಅಲ್ಪಕರ್ತೃಗಳು. ಆತನು ಸರ್ವವ್ಯಾಪಕನಾಗಿ ವಿಭುವೆನಿಸಿದ್ದಾನೆ. ನಾವು ಅಲ್ಪವ್ಯಾಪಿ (ನೇಮಿತ)ಗಳಾಗಿ ಸಂಕೋಚಗೊಂಡಿದ್ದೇವೆ. ಆತನು ನಮಗೆಲ್ಲ ಸಾಕ್ಷಿ; ಆತನ ವಿಮರ್ಶಾಕಲೆಯಾದ ಈ ವಿಶ್ವ ನಮ್ಮ ವಿಮರ್ಶೆಗೆ ಸಾಕ್ಷಿ! ಅವನು ಈ ವಿಶ್ವಕ್ಕೆ ಆಧಾರನಾಗಿದ್ದಾನೆ. ವಿಶ್ವ ನಮಗೆ ಆಧೇಯವಾಗಿದೆ. ಆದರಿಂದ ಆತನ ಆ ಪರಾಶಕ್ತಿರೂಪ ವಿಮರ್ಶೆಯು ವಿಶ್ವಕ್ಕೆ ಆಧಾರವಾಗಿದೆ, ಮತ್ತು ಮಹಾಸಂವಿತ್ಪ್ರಕಾಶದಿಂದ ಪರಿಪೂರಿತವಾಗಿದೆ ಆತನ ಆ ವಿಮರ್ಶಾಪರಾರಾಶಕ್ತಿ! ಅದು ಪರಾಹಂತಾಮಯವೂ ಆಗಿದೆ, ಅಪರಾಹಂತೆಯಂತೆ ಆ ಪರಾಹಂತತೆಗೆ ವಿಕೃತಿಯಾಗಲಿ ಕೊರತೆಯಾಗಲಿ ಇಲ್ಲ. ಅದು ಪರಮಾತ್ಮನ ಪರಿಪೂರ್ಣಶಕ್ತಿ, ನ್ಯೂನತೆಯಿಲ್ಲದ ವಿಮರ್ಶಾ ಸಾಮರ್ಥ್ಯ. ವಿಜೃಂಭಿಸಿದ ವಿಶ್ವತತ್ತ್ವಗಳೆಲ್ಲ ಆತನ ಪರಿಪೂರ್ಣ ವಿಮರ್ಶೆಯೆಂಬ ಭಾಂಡದಲ್ಲಿ ವಿನ್ಯಸಸ್ತವಾಗಿವೆ. ವಿಶ್ವತತ್ತ್ವ ಅನೇಕವಾಗಿದ್ದರೂ ಅವನ್ನೆಲ್ಲ ಆತನು ತನ್ನ ಏಕಮುಖದಿಂದ ನಿಟ್ಟಿಸುತ್ತಾನೆ ನಿಟ್ಟಿಸಿದರೂ ಬಂಧಕ್ಕೊಳಗಾಗುವುದಿಲ್ಲ. ಸ್ವತಂತ್ರನಾಗಿ ಸ್ವಾತ್ಮದಲ್ಲಿರುತ್ತಾನೆ. ಅಂತಹ ಪರಮವಿಮರ್ಶಕನ ಸಮರಸದಲ್ಲಿರುವ ಐಕ್ಯಸ್ಥಲಿಯು ಜೀವನ್ಮುಕ್ತನಾಗಿ ವಿಶ್ವೈಕ್ಯಭಾವದಿಂದ ಇರುತ್ತಾನೆ. ತನ್ನಲ್ಲಿ ತಾನೇ ಆಗಿರುತ್ತಾನೆ.

ವಿಮರ್ಶಾಶಕ್ತಿ ಅಥವಾ ಕಲೆ ಭಾಂಡಸ್ಥಲದಿಂದ ಭಾಜನಸ್ಥಲಕ್ಕೆ ಬರಬೇಕು. ಭಾಂಡಸ್ಥಲಕ್ಕಿಂತ ಭಾಜನಸ್ಥಲ ಸನ್ನಿಹಿತದ್ದು, ಇದರಿಂದ ವಿಮರ್ಶಾಶಕ್ತಿಗೆ ವಿಭುತ್ವ ಹೆಚ್ಚುತ್ತದೆ. ವಿಶಿಷ್ಟ ಚೈತನ್ಯ ಬರುತ್ತದೆ; ಲಾವಣ್ಯ ಬರುತ್ತದೆ. ಪ್ರಕಾಶ ಪ್ರಕರ್ಷವಾಗುತ್ತದೆ. ಇದನ್ನೆ ಇಲ್ಲಿ ಅಂದರೆ ಭಾಜನಸ್ಥಲದಲ್ಲಿ ಹೀಗೆ ಹೇಳಿದ್ದಾನೆ.

"ಸಮಸ್ತಜಗದಂಡಾನಾಂ ಸರ್ಗಸ್ಥಿತ್ಯಂತಕಾರಣಂ ।
ವಿಮರ್ಶೋ ಭಾಸತೇ ಯತ್ರ ತದ್ಭಾಜನಮಿಹೋಚ್ಯತೇ ॥
ವಿಮರ್ಶಾಖ್ಯಾ ಪರಾಶಕ್ತಿ ರ್ವಿಶ್ವ ವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಂ ॥
ಯಥಾ ಚಂದ್ರೇ ಸ್ಥಿರಾಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥...."

ರೇ. ಗೀ.

ಪರಶಿವನು ತನ್ನ ವಿಮರ್ಶಾಶಕ್ತಿವಿಡಿದು ಜಗನ್ನಿರ್ಮಾಣ ಜಗದ್ರಕ್ಷಣ ಜಗತ್ಸಂಹರಣ ಮಾಡುವನಾದ್ದರಿಂದ ವಿಮರ್ಶಾಶಕ್ತಿ ಎಲ್ಲ ಜಗತ್ತುಗಳೆಂಬ ಮೊಟ್ಟೆಗಳ ಸರ್ಗಸ್ಥಿತ್ಯಂತ ಕಾರಣವಾಗಿದೆ. ಈ ವಿಶ್ವದ ವಿವಿಧ ವಿಚಿತ್ರ ಗಳನ್ನೆಲ್ಲ ವಿಮರ್ಶಾತ್ಮಕ ಪರಾಶಕ್ತಿಯೇ ಮಾಡಿದೆ. ವಿಶ್ವ ವೈಚಿತ್ರ್ಯಕಾರಿ ಯಾದ ವಿಮರ್ಶಾ ಪರಾಶಕ್ತಿ ಪರಶಿವಬ್ರಹ್ಮದಲ್ಲಿ ಪ್ರತಿಷ್ಠಿತವಾಗಿರುವುದ ರಿಂದ ಈ ವಿಶ್ವ ಭಾಜನವಾಗಿದೆ. ಇರುಳಿನಲ್ಲಿ ವಿಶ್ವ ವಸ್ತುಗಳನ್ನು ಪ್ರಕಾಶ ಪಡಿಸುವ ಬೆಳದಿಂಗಳು ಚಂದ್ರನಲ್ಲಿ ಸ್ಥಿರವಾಗಿರುವಂತೆ ವಿಮರ್ಶಾ ಶಕ್ತಿಯು ಪರಶಿವಬ್ರಹ್ಮನಲ್ಲಿ ಸ್ಥಿರವಾಗಿದ್ದು ಪ್ರಕಾಶಿಸುತ್ತದೆ.

ಈ ವಿಶ್ವ ಭಾಜನದಲ್ಲಿಯೇ ವಿಮರ್ಶಾಶಕ್ತಿ ನಿಮ್ಮ ವಿಶಿಷ್ಟ ಗಸ ಪರಿ ಣಾಮವನ್ನು ಪಡೆಯಬೇಕು; ಮತ್ತು ಪರಾಹಂತತೆಯ ಪೂರ್ಣತೆಯನ್ನು ಪಡೆಯಬೇಕು. ಇದರಿಂದಾಗಿ ಪರಶಿವ. ಪರಾಶಕ್ತಿ ರೂಪ ವಿಮರ್ಶೆ ವಿಶ್ವ ಈ ತ್ರಿವಿಧಕ್ಕೆ ಭೇದಭಾವವಿಲ್ಲ. ವಿಶ್ವ ಭಾಜನದಲ್ಲಿಯೆ ವಿಮರ್ಶಾಶಕ್ತಿ ವಿಶಿಷ್ಟಾದ್ವೈತದ ಅನುಸಂಧಾನ ಮಾಡಿ ಅನನ್ಯಾನಂದವನ್ನು ಅನುಭವಿಸ ಬೇಕು. ಏಕೆಂದರೆ ವಿಶ್ವ ವಿಶ್ವನಾಥ ವಿಮರ್ಶಾತ್ಮಕ ಪರಾಶಕ್ತಿ ಈ ಮೂರು ಒಂದು ತ್ರಿವೇಣಿ ಸಂಗಮ ಅವಿಭಾಜ್ಯಗಳು.

"ವೃಕ್ಷಸ್ಥಂ ಪತ್ರ ಪುಷ್ಪಾದಿ ವಟ ಬೀಜಸ್ಥಿತಂ ಯಥಾ ।
ತಥಾ ಹೃದಯ ಬೀಜಸ್ಥಂ ವಿಶ್ವಮೇತತ್ಪರಾತ್ಮನಃ ॥

ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೇ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂ ಪದೇ ॥
ಅಹಂತಾಂ ಪರಮಾಂ ಪ್ರಾಪ್ಯ ಶಿವಶಕ್ತಿಮಯಾಂ ಸ್ಥಿರಾಂ ।
ಬ್ರಹ್ಮಭೂಯಂ ಗತೋ ಯೋಗೀ ವಿಶ್ವಾತ್ಮಾ ಪ್ರತಿಭಾಸತೇ ॥
ಅಂತಃಕರಣ ರೂಪೇಣ ಜಗದಂಕುರರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥"

ಪರಾಹಂತೆಯನ್ನು ಪಡೆದ ವಿಮರ್ಶಕನಿಗೆ ವಿಶ್ವ ಪರ್ಯಟನದ ಅಗತ್ಯ ವೇನಿಲ್ಲ. ಆಲದ ಚಿಕ್ಕ ಬಿತ್ತಿನಲ್ಲಿ ಆಲದ ಹೆಮ್ಮರವೆಲ್ಲ ಇರುವಂತೆ, ಆತ್ಮ ಪರಮಾತ್ಮರ ಹೃದಯ ಬೀಜಸ್ಥವಾಗಿದೆ ಈ ವಿಶ್ವ ವೃಕ್ಷ ! ಹೃದಯದ ಆ ಬೀಜವೇ ಅಹಂ ! ಆಕಾರವೇ ಪರಶಿವ; ಹಂಕಾರವೇ ಪರಾಶಕ್ತಿ ಶಿವಶಕ್ತಿ ಮಯವಾದ ಮಹತೋಮಹೀಯಾನ್ ಬ್ರಹ್ಮವಸ್ತುವು 'ಅಹಂ' ಎಂಬೀ ಏಕಪದದಲ್ಲಿ ಏಕವಾಗಿದೆ; ಅಂದರೆ ಏಕಸತ್ತೆಯನ್ನು ಪಡೆದಿದೆ. ಶಿವಶಕ್ತಿ ಮಯವಾದುದು ಪರಾಹಂತೆಯು. ಅದನ್ನು ಪಡೆದ ಪೂರ್ಣಾಖಂಡ ಯೋಗಿಯು ಬ್ರಹ್ಮಭೂಯನಾಗಿ ವಿಶ್ವಾತ್ಮನಾಗಿ ಪರಿಶೋಭಿಸುತ್ತಾನೆ.

'ಅಹಂ' ಎಂಬುದು ಅಲ್ಪ, ಅನಿಷ್ಟ ಎಂದು ಎಲ್ಲರೂ ಹೇಳುತ್ತಿರು ವುದೆತ್ತ? ಪರಾಕಾಶ ಶಿವಾನುಭಾವಿ ಶಿವಾಚಾರ್ಯನ ಈ ಅಹಂಪದದ ಪರಾ ಮರ್ಶೆಯೆತ್ತ? ಇದು ಈತನದೇ ಆದ **ಲೋಕೋತ್ತರ** ವಿಮರ್ಶಾತ್ಮಕ ಪರಾಶಕ್ತಿ, ಪರಮದೀಪ್ತಿ.

ಈ ಜಗದಂಕುರಕ್ಕೆ ಸಾರಿಬಂದ ಸ್ಫೂರ್ತಿಯ ನೆಲೆ ಯಾವುದು ? ಎಂಬೀ ಮೂಲಭೂತವಾಗಿ ಎಲ್ಲರಲ್ಲಿ ಎದ್ದೇಳುವ ಕೇಳಿಕೆಗೆ ಶಿವಾನುಭಾವಿ 'ಅಹಂ' ತತ್ತ್ವಾನುಭಾವಿ 'ಅಹಂ' ಭಾಜನಸ್ಥಲೀ ಶ್ರೀ ಶಿವಯೋಗಿ ಶಿವಾ ಚಾರ್ಯರು 'ಅಂತಃಕರಣರೂಪೇಣ.......'ಎಂಬೀ ಪರಾಮರ್ಶನ ಪರಿಪಕ್ವ ಪರಾವಾಣಿಯಿಂದ ಉತ್ತರಿಸುತ್ತಾನೆ. ಆ ಚಿಚ್ಛಕ್ತಿಯೇ ವಿಮರ್ಶಾತ್ಮಕ ಪರಾ ಶಕ್ತಿಯಾಗಿ ಸರ್ವರ ಅಂತಃಕರಣ ರೂಪದಲ್ಲಿ ಜಗದ್ರೂಪ ಅಂಕುರವಾಗಿ ಅವ

ಪಡೆದಿದೆ. ಆ ಚಿಚ್ಛಕ್ತಿ ಬೇರೆಯಲ್ಲ ಪರಶಿವಬ್ರಹ್ಮ ಬೇರೆಯಲ್ಲ. ಆವರಿಂದ ಜನಿಸಿದೀ ಜಗತ್ತು ಬೇರೆಯಲ್ಲ. ಈ ತ್ರಿವೇಣಿ ಸಂಗಮವು 'ಅಹಂ' ಕರಣ ದಲ್ಲಿ ಅಳವಟ್ಟಿದೆ.

'ಅಹಂ' ಇದು ಜಗದಂಕುರಕ್ಕೆ ಸೃಷ್ಟಿಗೆ ಮೂಲಕಾರಣವಾಗಿ ಅಂತಃ ಕರಣ ಬೀಜವಾಗಿ ಹೃದಯ ಭೂಮಿಗೆ ಅವತರಣಗೊಂಡಿದೆ ಶಿವಶಕ್ತಿ ಸ್ವರೂಪವಾಗಿ! ಆ ಪೂರ್ಣಾಹಂ ಸೃಷ್ಟಿನಿಮಿತ್ತವಾಗಿ ಈ ಅಂತಃಕರಣರೂಪ ದಲ್ಲಿ ಚೂರ್ಣಾಹಂ ಆಗಿ ತಲೆದೋರಿದೆ. ಮಹತ್ತಿಗೆ ಮಹತ್ತಾದ ಆ ಶಿವ ಶಕ್ತಿ ಅಣುವಿಗೆ ಅಣುವಾಗಿ ಅಂದರೆ ಚುಳುಕಾಗಿ ಅಂತಕರಣವಾಗಿದೆ. ಜಗ ದುದಯಕ್ಕೆ ಕಾರಣವಾಗಿದೆ.

'ಅಹಂ ಬಹುಸ್ಯಾಂ ಪ್ರಜಾಯೇತಿ' ಎಂಬೀಶ್ರುತಿ ಪ್ರಮಾಣದಂತೆ ಅಲ್ಲಿಯೇ ವಿಮರ್ಶ್ಯಾಶಕ್ತಿಯ ಸ್ಫೋಟವಾಗಿದೆ. ಆಗಿ ಆದು ಈ ಬ್ರಹ್ಮಾಂಡಕ್ಕೆ ಭಾಜನವಾಗಿ ಆ ಪೂರ್ಣಾಽಹಂ ಅಂತಃಕರಣರೂಪ ಚೂರ್ಣಾಽಹಂ ಆಗಿ ಬ್ರಹ್ಮಾಂಡವಾಗಿದೆ.

ಜಗದಂಕುರ 'ಅಹಂ' ಅಂತಃಕರಣರೂಪ ಬೀಜದಲ್ಲಿ. ನಾದಾತ್ಮಕ ಅಕಾರ ಶಿವಚೇತನದಲ್ಲಿ ಬಿಂದ್ವಾತ್ಮಕ ಹಂ–ಕಾರ ವಿಮರ್ಶ್ಯಾಶಕ್ತಿಯು ಸ್ಫೋಟ ವಾಗಿ ಜಗತ್ತು ಮೊಳೆಯಲು (ಹುಟ್ಟಲು) ನಿಮಿತ್ತವಾಯಿತಂ. ಅಂತಃ ಸ್ಥಿತವಾದುದು ಬಹಿರ್ಭೂತವಾಯಿತು; ಪ್ರಕೃತಿಯಾಯಿತು. ಮುಗಿಲು ಗಾಳಿ ಬೆಳಕು (ಬೆಂಕಿ) ನೀರು ನೆಲಗಳಾದವು, ಗಿಡ ಮರ ಬಳ್ಳಿಗಳಾದವು. ಚಿನ್ನ ಬೆಳ್ಳಿ ಧನ ಧಾನ್ಯಗಳಾದವು, ಜೀವಜಂತುಗಳಾದವು; ಮಾನವ ಮಹಾ ನುಭಾವರಾದರು. ಇವೆಲ್ಲವುಗಳ ನಿಲುವಿನಲ್ಲಿ 'ಅಹಂ' ನೆಲೆನಿಂತಿತು. ಇಲ್ಲಿ ನಿಲುವೇದರೆ ಭಾಜನಸ್ಥಲ! ಈ ಬ್ರಹ್ಮಾಂಡದ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣವಾಗಿ ಇವುಗಳಲ್ಲಿ ವಿಮರ್ಶ್ಯಾಶಕ್ತಿ ಕಲೆಯಾಗಿ ಬೆಳಗುತ್ತಿದೆ; ಬೆಳಗಿ ತೋರುತ್ತಿದೆ. ಕಾರಣ ಈ ಜಗತ್ಕಾರಣವೇ ಅಹಂ! ಈ ಕಾರ್ಯಕಾರಣ ಗಳು ವಿಮರ್ಶ್ಯಾತ್ಮಕ ಶಿವಶಕ್ತಿಗೆ ಭಾಜನಗಳು.

ವಿಮರ್ಶೆಯೇ ಶಕ್ತಿ ಮತ್ತು ಕಲೆ ! ವಿಮರ್ಶಾಶಕ್ತಿವಂತನೆ–ಕಲಾವಂತನೆ ಶಿವ ! ಶಕ್ತಿವಂತನಾಗಿ ಭಾಜನ ಕಾರಣನಾದನು; ಕಲಾವಂತನಾಗಿ ಭಾಜನ ಅಂದರೆ ಬ್ರಹ್ಮಾಂಡ ಕಾರ್ಯವಾದನು. ಸರ್ವ ಸಮರ್ಥನಾದ ಪರಶಿವನು ಕಾರಣನಾಗಬಲ್ಲ; ಕಾರ್ಯನಾಗಬಲ್ಲ. ಆಗದೆ ಇರಲೂಬಲ್ಲ. "ಜಗವಾಗಬಲ್ಲ ಜಗವಾಗದಿರಬಲ್ಲ ಎಂಬೀ ಅಲ್ಲಮಪ್ರಭುವಾಣಿಯನ್ನಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಭಾಂಡ–ಅಡುಗೆಯ ಪಾತ್ರೆ; ಭಾಜನ–ಆರೋಗಣ ತಟ್ಟೆ. ಪಾತ್ರೆಗಳಲ್ಲಿ ಮಾಡಿದ ಪದಾರ್ಥ ಭಿನ್ನ ಭಿನ್ನ; ತಟ್ಟೆಯಲ್ಲಿಟ್ಟ ಪದಾರ್ಥಗಳು ಭಿನ್ನ ಭಿನ್ನ ಭಾಂಡಗಳಲ್ಲಿರದೆ ಏಕಪಾತ್ರದಲ್ಲಿರುವವು; ಸನ್ನಿಕೃಷ್ಟವಾಗಿರುವವು. ಆರೋಗಿಸಿದಾಗ ಉದರ ಭಾಜನದಲ್ಲಿ ಸಾತಿಶಯ ಸನ್ನಿಕೃಷ್ಟವಾಗಿ ಸಮರಸಕ್ಕೆ ಬರುವವು; ಕ್ರಮೇಣ ಸಮರಸವೇ ಆಗುವವು. ಅಂದರೆ ರಸ–ರಕ್ತ ಮಾಂಸ ಮೇದಸ್ಸು, ಅಸ್ಥಿ, ಮಜ್ಜೆಗಳಾಗಿ ಕೊನೆಗೆ ಶುಕ್ರ ಅಂದರೆ ವೀರ್ಯವಾಗುವವು. ವೀರ್ಯವೆಂದರೆ ಶಕ್ತಿ: ಚೇತನಶಕ್ತಿ. ಅದರಿಂದ ಪಿಂಡೋತ್ಪತ್ತಿ.

ಪಿಂಡಾಂಡದ ಅಂಗಸ್ಥಲಗಳು ೪೪; ಲಿಂಗಸ್ಥಲಗಳು ೫೭! ಇವೆಲ್ಲ ಸೇರಿ ನೂರೊಂದು! ಲಿಂಗಸ್ಥಲಗಳಲ್ಲಿ ಭಾಂಡ–ಭಾಜನ ಸ್ಥಲಗಳು ಪರಿವಿಡಿದು ೫೨–೫೩ ! ಒಟ್ಟಾರೆ ನೂರೊಂದು ನೆಲೆಗಳಲ್ಲಿ ೯೬–೯೭ ! ಇನ್ನೇನು ನೂರೊಂದಾಗಲು ತೀರ ಸನ್ನಿಹಿತವಾಗಿದೆ. ನಾಲ್ಕೇ ನೆಲೆಗಳು ಉಳಿದಿವೆ. ೧೦೧ ಈ ನೂರೊಂದೇ– 'ಅಹಂ' ! ಮೊದಲೊಂದು ಅ–ಕಾರ; ಕೊನೆಯೊಂದು ಹ–ಕಾರ. ಇವೆರಡೂ ಸೇರಿ ನಡುವಿನ ಶೂನ್ಯ (ಪೂರ್ಣ) ವಾಗಿವೆ, ಮೊದಲಿನ ಒಂದು ಅಕಾರಾತ್ಮಕ ಶಿವ, ಕೊನೆಯ ಹಕಾರಾತ್ಮಕ ಶಕ್ತಿ; ನಡುವಿನ ಶೂನ್ಯವೆ ಪೂರ್ಣ ಸಂಕೇತ. ಈ ನೂರೊಂದಾದ ಅಹಂ ಶಿವಶಕ್ತಿ ಸ್ವರೂಪ ಪರಬ್ರಹ್ಮ ! ಪಿಂಡಾದಗತ ಚೈತನ್ಯ. ಪಿಂಡಂಡಗತ ನೂರೊಂದು ಪಿಂಡಾಂಡವೃಕ್ಷದ ಬೇರುಗಳು. ಬ್ರಹ್ಮಾಂಡವೃಕ್ಷದ ಮೇಲಿನ ರೆಂಬೆಗಳು ಪಿಂಡಾಂಡ–ಬ್ರಹ್ಮಾಂಡ ಅಭಿನ್ನ ಅವಿಭಾಜ್ಯ ಬೀಜ–ಭೂಜ ! ಇಂತಿದು ಶಿವ

ಯೋಗಿ ಶಿವಾಚಾರ್ಯರ ಅಸಾಧಾರಣ ವಿಮರ್ಶಾಶಕ್ತಿ: ವಿಮರ್ಶಾಕಲೆ ! ವಿಮರ್ಶಾಶಕ್ತಿಯ ಸ್ಪಂದನವೇ ಷಟ್‌ಸ್ಥಲಕ್ಕೆ ನಾಂದಿ ! ಅಂಗ–ಲಿಂಗವೆಂದು ಎರಡಾದರೂ ಶಕ್ತಿಯ ಸ್ಪಂದನದಿಂದ ! ಇದರಿಂದಾಗಿ ಅಂಗಸ್ಥಲ ವಿಕಾಸವಾಗಿ ೪೪ ಸ್ಥಲವಾಯಿತು; ಲಿಂಗಸ್ಥಲ ವಿಕಾಸವಾಗಿ ೫೭ ಸ್ಥಲವಾಯಿತು. ಎರಡೂ ಸೇರಿ ನೂರೊಂದು ನೆಲೆಯಾಯಿತೆಂದುದನ್ನು ಮೊಟ್ಟಮೊದಲು ಆವಿಷ್ಕರಿಸಿ ನಿರೂಪಿಸಿದವರು ಶಿವಯೋಗಿ ಶಿವಾಚಾರ್ಯ ಚಿದಾನಂದ ಪರಾಕಾಶ ಶಿವಾನುಭವ ಯೋಗಿಗಳು.



# ಸಿದ್ಧಾಂತ ಶಿಖಾಮಣಿಯ ಲಿಂಗ-ತತ್ತ್ವ ವಿಶ್ವಜನಾಂಗದ ಅಂತಃಸತ್ತ್ವ!

"ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಂ ।
ಯತ್ತಸ್ಯ ಧಾರಣಂ ಚಿತ್ತೇ ತದಾಂತರಮುದಾಹೃತಂ ॥"

ಲಿಂಗ ಒಂದು ಸಂಕೇತವಲ್ಲ, ಒಂದು ಪ್ರತೀಕವಲ್ಲ; ಒಂದು ಪ್ರಮೇಯ ವಸ್ತು ಮುನ್ನವೇ ಅಲ್ಲ. ಅದು ಚಿತ್‌ಸ್ವರೂಪ, ಅದು ಪರಮ. ಅದು ಸರ್ವಕ್ಕೆ ಕಾರಣ; ಅದು ಪರಶಿವಾನಂದಾತ್ಮಕ. ಚಿತ್ತದಲ್ಲಿ ಚಿಲ್ಲಿಂಗ ಧಾರಣ ಅದು ಅಂತರ್ಧಾರಣ

"ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಂ ।
ನಿರಸ್ತ ವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಂ ॥
ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸಕಲಾ (ಳಾ)ಮಯಂ ।
ಅಪ್ರಮೇಯಮನಿರ್ದ್ದೇಶ್ಯಂ ಮುಮುಕ್ಷುಭಿರುಪಾಸಿತಂ ॥
ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಂ ।
ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನ ಗೋಚರಂ ॥
ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ ।
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ ॥...."

—ರೇ. ಗೀ.

ಎಂಬೀ ಚಿಲ್ಲಿಂಗದ ಚನ್ನ ತತ್ತ್ವ ಚಿತ್ಕಾರವು ನಮ್ಮ ಚಿತ್ತ ಭಿತ್ತಿಯ ಮೇಲೆ ಅಚ್ಚಳಿಯದೆ ಅಚ್ಚೊತ್ತಿ ನಿಂತಿದೆ. ಓ ಎನಿತು ಬಿತ್ತರ ಚಿತ್ಕಾರ, ಎನಿತು ಎತ್ತರ ಚಿತ್ಕಾರ! ಅದು ವಿಶ್ವಕಾರಣ; ವಿಶ್ವವಿರಾಡ್ದರ್ಶನ! ಓ ಅದು ಆ ಪರತತ್ತ್ವ ಚೇತನ! ಅದು ವಿಶ್ವಕಾರಣವಾದರೂ ವಿಶ್ವಕಾಲು

ವಿಶ್ವಜನಾಂಗದ ಅಂತಃಸತ್ವ !

ಷ್ಯದೂರ, ಸಕಲವಾಗಿದ್ದರೂ ನಿಷ್ಕಲ. ವಿಕಲ್ಪವಿದೂರ, ಅಂದರೆ ಸಂದಿಗ್ಧತೆಗೆ ಕುಕಲ್ಪನೆಗೆ ವಿಭೇದಕ್ಕೆ ಅನವಧಾನಕ್ಕೆ ಇಂಬಿಲ್ಲದ್ದು, ಇದಕ್ಕೆ ಪ್ರತಿಯಾಗಿ ಸತ್ತಾನಂದಪರಿಸೂರ್ತಿಸಪುಲ್ಲಾಸಕಲಾ (ಳಾ) ಮಯವಾದುದು. ಅಂದರೆ ಶಾಶ್ವತ ಸಂತೋಷದಿಂದುಂಟಾದ ಉಂಟಾಗುವ ಪರಿಸ್ಫೂರ್ತಿಯನ್ನು ಲೇಸಾಗಿ ಅರಳಿಸುವ ಕಳೆ-ಕಲೆಗಳುಳ್ಳುದು ಅಳತೆಗೆ ಎಟುಕದ್ದು, ತೋರಲು ಬಾರದ್ದು;ಅಂತಿದ್ದರೂ ಮೋಕ್ಷಾಪೇಕ್ಷಗಳಿಂದ ಉಪಾಸಿತವಾಗುವಂತಹದ್ದು. ಚಿತ್ತ ಭಿತ್ತಿಯ ಮೇಲೆ ಗುರುಕಾರುಣ್ಯದಿಂದ ಮೂಡಿದ ಚಿಲ್ಲಿಂಗವೇ ಮಹಾಲಿಂಗ: ಪರಬ್ರಹ್ಮ: ಶಾಶ್ವತ, ಪ್ರಪಂಚಾತೀತ. ಅಂತಿರುವ ಅದುವೇ ಸರ್ವಭೂತಗಳ ಸರ್ವದೇಹಿಗಳ ಅಂತರಂಗದ ಮೂಲಾಧಾರದಲ್ಲಿ ಮಧ್ಯ ಹೃದಯದಲ್ಲಿ ಭ್ರೂಮಧ್ಯದಲ್ಲಿ ಈ ಮೂರು ಸ್ಥಲಗಳಲ್ಲಿ ಗುರುಕರುಣೆಯಿಂದ ಗೋಚರಿಸಿ ಜ್ಯೋತಿರ್ಲಿಂಗವಾಗಿ ನಿರಂತರ ಬೆಳಗುತ್ತಿದೆ, ಆದನ್ನೆ ಆಗಮಿಕಾನುಭಾವಿಗಳು ಪರಶಿವ ಬ್ರಹ್ಮವೆಂದು ನಿರೂಪಿಸಿರುವರು.

"ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮಂ ಸನಾತನಂ ।
ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥
ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ ॥
ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾನಂದ ಚಿದಾತ್ಮಕಂ ।
ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಂ॥" ರೇ. ಗೀತೆ

ಚಿತ್ತಕ್ಕೆ ಬಂದ ಚಿನ್ಮಯ ಲಿಂಗವು ದೇಶಕಾಲ ವಸ್ತುಗಳಿಂದ ಪರಿಚ್ಛಿನ್ನವಲ್ಲ; ವ್ಯಕ್ತವಲ್ಲ: ಲಿಂಗಬ್ರಹ್ಮವು ಸನಾತನವಾದುದು. ಮುಮುಕ್ಷುಗಳ ಉಪಾಸನಾರ್ಥವಾಗಿ ಸ್ವಶಕ್ತಿಯಿಂದ ಪರಿಚ್ಛಿನ್ನವಾಗಿ ಅಂತಸ್ಥವಾಗಿದೆ. ಚರಾಚರ ಜಗತ್ತು ಅದರಲ್ಲಿಯೇ ಲೀನವಾಗಿ ಮತ್ತೆ ಮತ್ತೆ ಸಮ್ಯಕ್ಕಾಗಿ ಉತ್ಪತ್ತಿಗೊಳ್ಳುತ್ತದೆಯೋ ಅದುವೆ ಶಾಶ್ವತವಾದ ಲಿಂಗಬ್ರಹ್ಮವು; ಬ್ರಹ್ಮಲಿಂಗವು. ಆದರೀದ ಅದು ಲಿಂಗವೆಂದೇ ಖ್ಯಾತವಾಗಿದೆ. ಮತ್ತು ಸಚ್ಚಿದಾನಂದಾತ್ಮಕ

ವಾಗಿದೆ, ನಿತ್ಯಪೂರ್ಣ ಖಂಡವಾಗಿದೆ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾಗಿ ಲಿಂಗವೆನಿಸಿದರೆ ಬೃಹತಾಗಿ ಮಹತ್ತಾಗಿ ವಿಸ್ತೃತವಾಗಿ ಇರುವುದರಿಂದ ಬ್ರಹ್ಮವೆನಿಸಿದೆ.

ಆಧಾರ ಹೃದಯ ಭ್ರೂಮಧ್ಯಗಳಲ್ಲಿ ಚಿಜ್ಜ್ಯೋತಿರ್ಮಯ ಲಿಂಗವನ್ನು ನಿರಂತರ ಅನುಸಂಧಾನಿಸಿ ಧಾರಣ ಮಾಡಬೇಕೋಳಗೆ ! ಆಧಾರದಲ್ಲಿ ಚಿನ್ನಬಣ್ಣ, ಹೃದಯದಲ್ಲಿ ಹವಳಬಣ್ಣ, ಭ್ರೂಮಧ್ಯದಲ್ಲಿ ಸ್ಫಟಿಕವರ್ಣಗಳನ್ನು ಭಾವಿಸಬೇಕು. ನಿರುಪಾಧಿಕವಾದ ಚಿಲ್ಲಿಂಗವನ್ನು ಅನುಸಂಧಾನ ಮಾಡಿದರೆ ಈ ಘೋರವಾದ ಸಂಸಾರಮಂಡಲದಲ್ಲಿ ಪುನರಾವೃತ್ತಿಯುಂಟಾಗದು. ಅಂದರೆ ಪುನರ್ಜನ್ಮ ಪ್ರಾಪ್ತಿಸದು. ಅದನು ಯಾರಾದರೂ ಅನುಸಂಧಾನ ಮಾಡಬಹುದು. ಗುರುಕರುಣೆಯ ಪಡೆದು ! ಅದರ ಅನುಸಂಧಾನ ಅದೋಂದುಂ ಆತ್ಮವಿದ್ಯೆ. ಅದು ಮುಕ್ತಿಸಂಪತ್ತಿಗೆ ಸಾಧನ. ಅದರಿಂದ ಗುರೂಪಾಸನಶಕ್ತಿ–ಆಸಕ್ತಿ ಅಧಿಕವಾಗುತ್ತದೆ. ಭಕ್ತಿ ಜ್ಞಾನ ವೈರಾಗ್ಯಗಳು ಹೆಚ್ಚಿ ಚಿತ್ತಸ್ಥಿರವಾಗುತ್ತದೆ. ಪೂರ್ಣಪ್ರಜ್ಞೆಯುಂಟಾಗುತ್ತದೆ.ಪರಮಾನಂದ ಪ್ರಾಪ್ತಿಸುತ್ತದೆ. ಪಂಚಕ್ಲೇಶ ಪರಿಹಾರವಾಗುತ್ತವೆ. ಆದರೆ ಗುರುದೀಕ್ಷೆಯಾಗದೆ ಅದು ಲಭಿಸದು; ಆದರ ಅನುಸಂಧಾನ ಅಳವಡದು. ಶಿವಲಿಂಗತತ್ತ್ವವನ್ನು ಸಂಬೋಧಿಸುವ ಪ್ರಣವ ಪಂಚಾಕ್ಷರ ಮಂತ್ರವನ್ನು ಗುರುದೇವನಿಂದ ಪಡೆಯಬೇಕು. ಇದು ಅದರ ಉಪಾಸನೆಗೆ ಅನುಸಂಧಾನಕ್ಕೆ ಮಾಧ್ಯಮ ಸಾಧನವಾಗುತ್ತದೆ. ಮಂತ್ರಕ್ಕೂಲಿಂಗಕ್ಕೂ ಅಭಿಧಾನ-ಅಭಿಧೇಯ ಸಂಬಂಧವಿದೆ. ಸಾತತ್ಯ ಸಂಬಂಧವಿದೆ, ಮಂತ್ರದಲ್ಲಿ ಪರಶಿವಬ್ರಹ್ಮನು ಸಂವಿದಾಕಾರವಾಗಿ ನಿಷ್ಕಲನೂ ವಿಶ್ವಮೂರ್ತಿಯಾಗಿ ಸಕಲನೂ ಆಗಿರುತ್ತಾನೆ. ಇದರಿಂದಾಗಿ ಲಿಂಗತತ್ತ್ವವು ವಿಶ್ವದವರೆಲ್ಲರ ಸೊತ್ತು. ಲಿಂಗತತ್ತ್ವಾನುಸಂಧಾನಿ ಸದಾ ಶುಚಿ ! ಲಿಂಗದಲ್ಲಿ ಪ್ರಾಣವನ್ನು ಪ್ರಾಣದಲ್ಲಿ ಲಿಂಗವನ್ನು ವಿನ್ಯಾಸಗೊಳಿಸುವಿಕೆಯೆ ಅನುಸಂದಾನ. ಅದರಿಂದ ಸ್ವಸ್ಥಮಾನಸ್ಕನಾಗಿ ಜೀವನ್ಮುಕ್ತನಾಗಿ ಚಿಲ್ಲಿಂಗ ಪ್ರಸಾದಿಯಾಗುತ್ತಾನೆ. ಲಿಂಗತತ್ತ್ವ

## ವಿಶ್ವಜನಾಂಗದ ಅಂತಃಸತ್ವ !

ರಾಧನೆಗೆ ಹೆಣ್ಣುಗಂಡೆಂಬ ಜಾತಿ ಬೇಧವಿಲ್ಲ. ಕುಲ ಪಂಥ ಭೇದವಿಲ್ಲ. ಆಹ್ವಾನ ವಿಸರ್ಜನ ರೂಪ ಅಪಾಸ್ತವಪ್ರಸಂಗವಿಲ್ಲ.

"ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾಸ್ಥಿತಃ।
ಕುಟೀಭಾವಾದ್ಯಥಾಭಾತಿ ಪಟಃ ಸ್ವಸ್ಯಪ್ರಸರಣಾತ್॥
ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನಭಿದ್ಯತೇ।
ಫೇನೋರ್ಮಿಬುದ್ಬುದಾಕಾರೋ ಯಥಾಸಿಂಧೋರ್ನಭಿದ್ಯತೇ॥"
—ರೇ. ಗೀತೆ

ಶಿವಲಿಂಗತತ್ತ್ವದ ವಿಶ್ವಾತ್ಮತ್ವ ಪಟೋಪಮೆಯಿಂದ ಸ್ಫುಟವಾಗಿ ನಿರೂಪಿತವಾಗಿದೆ. ಹೃದಯಸ್ಥ ಲಿಂಗತತ್ತ್ವ ಆತ್ಮಶಕ್ತಿ ವಿಕಾಸದಿಂದ ವಿಶ್ವಾತ್ಮರೂಪವನ್ನು ತಾಳಿರುತ್ತದೆ. ಚಾಪೆ ಸುತ್ತಿದರೆ ಸಂಕೋಚವಾಗಿ, ಬಿಚ್ಚಿದರೆ ವಿಸ್ತಾರವಾಗುವಂತೆ ಹೃಲ್ಲಿಂಗ ಚುಳುಕಾಗಿದ್ದರೂ ಆತ್ಮಶಕ್ತಿವಿಕಾಸದಿಂದ ವಿಶ್ವಾತ್ಮತ್ವ ಲಭಿಸುತ್ತನೆ. ಶಿವತತ್ತ್ವದಿಂದುದಿಸಿದ ಈ ಜಗತ್ತು ಶಿವತತ್ತ್ವಕ್ಕೆ ಭಿನ್ನವಲ್ಲ. ಕಡಲ ನೀರಿಗೂ ನೀರ್ತೆರೆಗಳಿಗೂ ಭಿನ್ನತೆಯಿಲ್ಲದು. ತೆರೆಗಳೇ ನೀರು, ನೀರೇ ತೆರೆಗಳು. ಶಿವಾತ್ಮಕವೇ ವಿಶ್ವ. ವಿಶ್ವಾತ್ಮಕವೇ ಶಿವ ಅಥವಾ ಲಿಂಗ.

"ಶಿವಶಕ್ತಿ ಸಮಾಯೋಗಂ ವಿಶ್ವಂ ಲಿಂಗಂ ತದುಚ್ಯತೇ।
ಸರ್ವಂ ಶಿವಮಯಂ ವಿಶ್ವಂದೃಶ್ಯತೇ ನಾತ್ರ ಸಂಶಯಃ॥
ಕಾರಣಂ ಸರ್ವಲೋಕಾನಾಂ ವೇದಾನಾಮಪಿ ಕಾರಣಂ ।
ಪೂರಣಂ ಸರ್ವತತ್ತ್ವಾನಾಂ ತಾರಣಂ ಜನ್ಮವಾರಿಧೇಃ ॥
ಜ್ಯೋತಿರ್ಮಯಮನಿರ್ದೇಶ್ಯಂ ಯೋಗಿನಾಮಾತ್ಮನಿ ಸ್ಥಿತಂ ।
ಕಥಂ ವಿಜ್ಞಾಯತೇ ಲೋಕೇ ಮಹಾಗುರುದಯಾಂ ವಿನಾ ॥
ವಿಶ್ವಾಧಿಪತ್ಯಮೀಶಸ್ಯ ಲಿಂಗಮೂರ್ತೇಃ ಸ್ವಭಾವಜಂ ।
ಅನನ್ಯ ದೇವಸಾದೃಶ್ಯಂ ಶ್ರುತಿರಾಹ ಸನಾತನೀ ॥ "—ರೇ. ಗೀ.

## ವಿಶ್ವಜನಾಂಗದ ಅಂತಃಸತ್ವ !

ಶಿವಶಕ್ತಿ ಸಮಾಯೋಗದಿಂದ ವಿಶ್ವವು ಲಿಂಗವಾಗಿ ಪರಿಣಮಿಸುತ್ತದೆ. ವಿಶ್ವವೆಲ್ಲ ಶಿವಮಯವಾಗಿ ಕಾಣುವಲ್ಲಿ ಯಾವ ಸಂಶಯವಿಲ್ಲ. ಜ್ಯೋತಿರ್ಮಯ ಚಿಲ್ಲಿಂಗವು ಸರ್ವಲೋಕಗಳಿಗೆ, ಸರ್ವವೇದಗಳಿಗೆ ಕಾರಣ. ಸರ್ವತತ್ತ್ವಗಳಿಗೆ ಪೂರಣ. ಜನ್ಮಜಲಧಿಯ ತಾರಣ. ಜ್ಯೋತಿರ್ಮಯವಾಗಿ ಅನಿರ್ದೇಶ್ಯವಾಗಿ ಯೋಗಿಗಳ ಆತ್ಮದಲ್ಲಿರುತ್ತದೆ. ಮಹಾ ಗುರುಕೃಪೆಯಿಲ್ಲದೆ ತಿಳಿಯದು. ಶಿವ ಸ್ವರೂಪ ಲಿಂಗಮೂರ್ತಿಗೆ ವಿಶ್ವಾಧಿಪತ್ಯ ಸ್ವಾಭಾವಿಕ ! ಅದಕ್ಕೆ ಅನ್ಯದೇವ ಸಾದೃಶ್ಯವಿಲ್ಲ.

"ಲಿಂಗಾನ್ನಾಸ್ತಿ ಪರಂ ತತ್ತ್ವಂಯದಸ್ಮಾಜ್ಜಾಯತೇ ಜಗತ್ ।
ಯದೇತದ್ರೂಪತಾಂ ಧತ್ತೇಯದತ್ರಲಯಮಶ್ನುತೇ ॥
ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ ।
ನಿಜರೂಪಮಿತಿ ಧ್ಯಾನಾತ್ತದವಸ್ಥಾ ಪ್ರಜಾಯತೇ ॥

ಜಗಜ್ಜನ್ಮಕಾರಣವಾದ ಲಿಂಗತತ್ವಕ್ಕೆ ಉತ್ತುಂಗ ತತ್ತ್ವವಿಲ್ಲ. ಏಕೆಂದರೆ ಜಗಜ್ಜನ್ಮಸ್ಥಿತಿ ಲಯಕಾರಣವಾಗಿ ಸಚ್ಚಿದಾನಂದ ಪರಬ್ರಹ್ಮವಾಗಿದೆ. ಲಿಂಗ ತತ್ತ್ವವನ್ನು ನಿಜರೂಪವೆಂದರಿದು ಧ್ಯಾನಿಸಿದರೆ ಲಿಂಗ ಸ್ವರೂಪವೇ ಉಂಟಾ ಗುತ್ತದೆ. ಅಂದರೆ ಚಿನ್ಮಯತ್ವವೇ ಲಭಿಸುತ್ತದೆ.

" ಜ್ಞಾನಮಂಗಮಿತಿ ಪ್ರಾಹುರ್ಜ್ಞೇಯಂ ಲಿಂಗಂ ಸನಾತನಂ ।
ಜ್ಞಾತ್ವಾಯಃ ಸತತಂ ಲಿಂಗಂ ಸ್ವಾಂತಸ್ಥಂ ಜ್ಯೋತಿರಾತ್ಮಕಂ ।
ಪೂಜಯೇದ್ಭಾವಕುಸುಮೈಸ್ತಂ ವಿದ್ಯಾದಂಗಲಿಂಗಿನಂ ॥
ಜ್ಞಾಯತೇ ಲಿಂಗಮೇವೈಕಂ ಸರ್ವೈಃ ಶಾಸ್ತ್ರೈಃ ಸನಾತನೈಃ ।
ಬ್ರಹ್ಮೇತಿ ವಿಶ್ವಧಾಮೇತಿ ವಿಮುಕ್ತೇಃ ಪದಮಿತ್ಯಪಿ ।
ಮುಕ್ತಿರೂಪಮಿದಂ ಲಿಂಗಮಿತಿ ಯಸ್ಯ ಮನಃ ಸ್ಥಿತಿಃ ।
ಸಮುಕ್ತೋದೇಹಯೋಗೋಽಪಿ ಸಜ್ಞಾನೀ ಸಮಹಾಗುರುಃ ॥"

ರೇ. ಗೀತೆ

## ವಿಶ್ವಜನಾಂಗದ ಅಂತಃಸತ್ವ !

ಜ್ಞಾನವೇ ಅಂಗ, ಜ್ಞೇಯವೇ ಲಿಂಗ ಎಂದರಿತು ಎರಕಗೊಳ್ಳುವುದೇ ಚಿನ್ಮಯತತ್ತ್ವ! ತನ್ನೊಳಗಿರುವ ಜ್ಯೋತಿರಾತ್ಮವಾದ ಲಿಂಗವನ್ನು ಅರಿತು ಅರ್ಚಿಸಿ ದಲ್ಲಿ ಅಂಗಲಿಂಗಿಯೆನಿಸುತ್ತಾನೆ. ಆ ಅರ್ಚನೆಗೆ ಭಾವಕುಸುಮಗಳಾಗಬೇಕು. ಆತ ನಿಗೆ ಅದೇ ಬ್ರಹ್ಮ, ಅದೇ ವಿಶ್ವಧಾಮ, ಅದೇ ವಿಮುಕ್ತಿಪದ ಎಂದು ತಿಳಿದು ಬರುತ್ತದೆ. ಅದನ್ನೆ ಸನಾತನ ಸರ್ವ ಶಾಸ್ತ್ರಗಳು ಲಿಂಗವೆಂದು ಲಕ್ಷಿಸಿದುದರ ಅರಿವುಂಟಾಗುತ್ತದೆ. ಆ ಅರಿವು ಕರಿಗೊಂಡಾತನೇ ಕಾಯಯೋಗವಿದ್ದರೂ ಜೀವನ್ಮುಕ್ತನು; ಆತನೇ ಮಹಾಜ್ಞಾನಿಯು; ಆತನೇ ಮಹಾಗುರುದೇವನು. ಈ ಶಿವಲಿಂಗಾದ್ವೈತಭಾವ ಸಿದ್ಧಿಯಿಂದ ಚಣದಲ್ಲಿ ಆಗುವ ಆನಂದ,ವಿಷಯ ಭೋಗಗಳಿಂದ ಕೋಟಿ ವರುಷಕ್ಕೂ ಲಭಿಸದು. ಚಿಲ್ಲಿಂಗದ ಸುಖವೇ ಸುಖ ಪ್ರಕಾಶವೇ ಪ್ರಕಾಶ: ಸತ್ತೆಯೇ ಸತ್ತೆ ! ಅದನ್ನು ಅಳವಡಿಸಿಕೊಂಡ ವನೇ ವಿಶ್ವವಿಜಯ ವಿಭುತಿ ಪುರುಷನು.

"ಪರಾಹಂತಾಮಯೇ ಸ್ವಾತ್ಮಪಾವಕೇ ವಿಶ್ವಭಾಸಕೇ।
ಇದಂತಾಹವ್ಯಹೋಮೇನ ವಿಶ್ವಹೋಮೀತಿಕಥ್ಯತೇ॥
ಅಹಂ ಶಿವೋ ಗುರುಶ್ಚಾಹಮಹಂ ವಿಶ್ವಂ ಚರಾಚರಂ ।
ಯಯಾ ವಿಜ್ಞಾಯತೇ ಸಮ್ಯಕ್ ಪೂರ್ಣಾಹಂತೇತಿ ಸಾ ಸ್ಮೃತಾ॥
ಆಧಾರವಹ್ನೌ ಚಿದ್ರೂಪೇ ಭೇದಜಾತಂ ಜಗದ್ಧವಿಃ।
ಜುಹೋತಿ ಜ್ಞಾನಜುಹ್ವಾಯ: ಸ ಜ್ಞೇಯೋ ವಿಶ್ವಹವ್ಯಭುಕ್।...
ಸೈಷಾ ವಿದ್ಯಾ ಪರಾ ಜ್ಞೇಯಾ ಸತ್ತಾನಂದ ಪ್ರಕಾಶಿನೀ।
ಮುಕ್ತಿರಿತ್ಯುಚ್ಯತೇ ಸದ್ಭಿರ್ಜಗನ್ಮೋಹ ನಿವರ್ತಿನೀ ।

ವಿಶ್ವವನ್ನೆಲ್ಲ ಪ್ರಕಾಶಗೊಳಿಸುವ ಪರಾಹಂತಾತ್ಮಕವಾದ ಸ್ವಾತ್ಮ ಜ್ಯೋತಿಯಲ್ಲಿ ಇದಂತಾ ಎಂಬ ಹವ್ಯವನ್ನು ಹೋಮ ಮಾಡುವುದರಿಂದ ವಿಶ್ವವಿಭೂತಿ ಪುರುಷನು ವಿಶ್ವಹೋಮಿಯೆಂದೆನಿಸುತ್ತಾನೆ. ಪರಾಹಂತೆ ಯೆಂದರೆ ಪೂರ್ಣಾಹಂತೆ; ಇದಂತಾ ಅಂದರೆ ದೃಶ್ಯಮಾನವಾದ ವಿಶ್ವದ

ಚೂರ್ಣಭಾವ. ಈ ಚೂರ್ಣಾಹಂಭಾವವು ಪೂರ್ಣಾಹಂಭಾವವಾಗಬೇಕಾದರೆ ಶಿವೋಽಹಂ, ಗುರುರಹಂ,ಚರಾಚರ ವಿಶ್ವಮಹಂ ಎಂದು ತನ್ನಲ್ಲಿ ಸಮನ್ವಯಿಸಿ ಸಮ್ಯಕ್ಕಾಗಿ ಸಂವೇದನಿಸುವಿಕೆ ಯಾವನಲ್ಲಿ ಉಂಟಾಗುವುದೋ ಅದುವೆ ಪೂರ್ಣಾಹಂತೆ ಎಂದು ಎಣಿಸಲಾಗಿದೆ.

ಚಿದ್ರೂಪ ಆಧಾರಾಗ್ನಿಯಲ್ಲಿ ಭೇದದಿಂದುಂಟಾದ ಜಗತ್ತೆಂಬ ಹವಿಸ್ಸನ್ನು ಹೋಮಿಸುವಾತನೇ ಜ್ಞಾನಹೋಮಿ; ಆತನೇ ವಿಶ್ವಹವ್ಯ ಭೋಕ್ತೃ ಇದುವೇ ಸತ್ತ್ವಾನಂದ ಪ್ರಕಾಶಕವಾದ ಪರಾ ವಿದ್ಯೆ; ಪರಾಮುಕ್ತಿ; ಇದು ಈ ಜಗನ್ಮೋಹವನ್ನು ಮಾಣಿಸುವ ಮಹಾಶಕ್ತಿ !

ಇದು ಒಳಬೆಳಗಿನ ಆರಾಧನೆ. ಅಹಂಕಾರದ ಅಂಧಕಾರವನ್ನು ಬಾಹ್ಯದ ಭ್ರಾಂತಿಯನ್ನು ಬೆಳಗುವ ಪೂರ್ಣಾಹಂತೆಯ ಆರಾಧನೆ.ತನ್ನ ಗುರು ತನ್ನ ಶಿವ, ತನ್ನ ವಿಶ್ವ ಎಂದೆನ್ನದೆ ತಾನೆಗುರು ತಾನೆ ಶಿವ, ತಾನೆ ವಿಶ್ವ ಎಂಬುದಾಗಿ ಚನ್ನಾಗಿ ಅರಿದು ಆಳವಡಿಸಿಕೊಳ್ಳುವಿಕೆಯ ಪೂರ್ಣಾಹಂ ಎಂದು ವಿಭಾವಿಸುವ ಆರಾಧನೆ. ವಿಶ್ವವನ್ನೆಲ್ಲ. ತನ್ನಮೂಲಾಧಾರದ ಚಿದಗ್ನಿಯಲ್ಲಿ ಹೋಮ ಮಾಡಿ ವಿಶ್ವವನ್ನೇ ಚಿನ್ಮಯವಾಗಿಸುವ ಆಗಿಸಿ ತಾನೆ ವಿಶ್ವಹವ್ಯ ಭೋಕ್ತೃವಾಗುವ ವಿಶ್ವಾರಾಧನೆ. ಇದುವೆ ಪರಾವಿದ್ಯೆ: ಇದರಿಂದ ಜಗನ್ಮೋಹ ಮುಕ್ತಿ. ಎಂತಹ ಭವ್ಯ ಭಾವನೆ, ವಿಶ್ವಾರಾಧನೆ. ಪೂರ್ಣಾಹಂ ಸಾಧನೆ ! ಅದು ಇದು ಎಂಬುದೇನೂ ಉಳಿಯದು. ತಾನು ತನ್ನದು ತನ್ನವರು ಎಂಬುದಿರದು. ಏನೆಲ್ಲವೂ ತಾನೆ ಆಗುವ ಅಖಂಡಯೋಗವಿದು. ಅಖಂಡ ಭಾವವಿದು. ಅಂತರ್ಭಾವವಿದು.

"ಪರಾನಂದಂ ಚಿದಾಕಾರಂ ಪರಬ್ರಹ್ಮೈವ ಕೇವಲಂ।
ಲಿಂಗಂ ಸದ್ರೂಪತಾಪನ್ನಂ ಲಕ್ಷ್ಯತೇ ವಿಶ್ವಸಿದ್ಧಯೇ ॥

ಇನ್ನು ಚಿತ್ ಆದಂತೆ ಸತ್ ಆದುದನ್ನು ಆಗುವಿಕೆಯನ್ನು ಅನುಲಕ್ಷಿಸಿದ್ದಾನೆ ಶಿವಾಚಾರ್ಯ ಮಹಾನುಭಾವಿ !

ವಿಶ್ವಜನಾಂಗದ ಅಂತಃಸತ್ತ್ವ !

ಚಿದಾಕಾರವೂ ಪರಾನಂದವೂ ಕೇವಲವೂ ಆದ ಆ ಪರಬ್ರಹ್ಮವೆ ಸದ್ರೂಪವನ್ನು ಪಡೆದು ಲಿಂಗವಾಗುತ್ತದೆ ವಿಶ್ವಸಿದ್ಧಿಗಾಗಿ ! ಅಂದರೆ ಶಿವೆ ಕುರುಹಾಗಿ ಕರಿಗೊಳ್ಳುವುದಾದರೂ ಬೇರಾವುದಕ್ಕಲ್ಲ ವಿಶ್ವಸಿದ್ಧಿಗಾಗಿ! ಜ್ಞಾನಲಿಂಗವು ಕ್ರಿಯಾಲಿಂಗವಾಗಿ ಪರಿಣಮಿಸುತ್ತದೆ ಗುರುಕಾರುಣ್ಯದಿಂದ ವಿಶ್ವಜೀವನ ಶುದ್ಧಿಗಾಗಿ ಸಿದ್ಧಿಗಾಗಿ! ಲಿಂಗ ಭೋಗೋಪಭೋಗಕ್ಕಾಗಿ! ಇದರಿಂದ ವಿಶ್ವಸಾರ್ಥಕತೆ ಸಂಪಾದಿತವಾಗುತ್ತದೆ. ಕ್ರಿಯಾಯೋಗವಿಲ್ಲದೆ ಕರ್ಮ ಸತ್ಯಶುದ್ಧಕಾಯಕವಾಗದು; ಕಾಯುಯೋಗವಾಗದು. ಖಚಿತ ಮೌಲ್ಯ ಬಾರದು. ಕ್ರಿಯಾಲಿಂಗ ಪೂಜೆಗೆ ಸರಿಮಿಗಿಲಿಲ್ಲ.

"ಯಜ್ಞಾದಯ: ಕ್ರಿಯಾ: ಸರ್ವಾ ಲಿಂಗಪೂಜಾಂಶಸಮ್ಮಿತಾ:।
ಇತಿ ಯತ್ಪೂಜ್ಯತೇ ಸಿದ್ಧೈಸ್ತತ್ಕ್ರಿಯಾಲಿಂಗಮುಚ್ಯತೇ॥
ಯದೃಚ್ಛಾಲಾಭಸಂತುಷ್ಟೋ ಜಿತೇಂದ್ರಿಯ:।
ಸಮವೃತ್ತಿರ್ಭವೇದ್ಯೋಗೀ ಭಿಕ್ಷುಕೇ ಪಾರ್ಥಿವೇಽಥ ವಾ॥
ಪಶ್ಯನ್ ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವಶ:।
ಸ್ಮಯಮಾನ: ಪರಾನಂದೇ ಲೀನಾತ್ಮಾ ವರ್ತತೇ ಸುಧೀ:।
ಧ್ಯಾನಂ ಶೈವಂ ತಥಾ ಜ್ಞಾನಂ ಕ್ರಿಯಾ ಚೈಕಾಂತಶೀಲತಾ।
ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ॥" —ರೇ. ಗೀತೆ

ಯಜ್ಞಾದಿ ಜಡಕರ್ಮಗಳೆಲ್ಲವು ಕ್ರಿಯಾಲಿಂಗ ಪೂಜಾಂಶವುಳ್ಳವೆಂದು ತಿಳಿದು ಶುದ್ಧಸಿದ್ಧರು ಪೂಜಿಸುವುದೆ ಕ್ರಿಯಾಲಿಂಗ! ಸಹಜವಾಗಿ ಬಂದುದರಲ್ಲಿಯೇ ಅಂದರೆ ಬಯಸದೆ ಬಂದುದರಲ್ಲಿಯೇ ಸಂತುಷ್ಟನಾಗಿ ಭಸ್ಮನಿಷ್ಠವಾಗಿ ಜಿತೇಂದ್ರಿಯನಾಗಿ, ಭಿಕ್ಷುಕನಲ್ಲಿ ಭೂಪತಿಯಲ್ಲಿ ಸಮಬುದ್ಧಿಯಿಂದ ವರ್ತಿಸುವವನೇ ಕ್ರಿಯಾಯೋಗಿ. ಸಂಸಾರದಲ್ಲಿರುವ ಸರ್ವ ಪ್ರಾಣಿಗಳನ್ನು ಎಲ್ಲ ಬಗೆಯಲ್ಲಿ ಕಾಣುವವನಾಗಿ ಪರಾನಂದದಲ್ಲಿ ತಲ್ಲೀನನಾಗಿ ತನ್ನಿಂದತಾನೆ ಇರುವಾತನೆ ಬುದ್ಧಿವಂತನು. ಆತನಿಗೆ ಶಿವಧ್ಯಾನ, ಶಿವಜ್ಞಾನ ಶಿವಕ್ರಿಯೆ, ಏಕಾಂತ ಶೀಲತೆ ಈ ನಾಲ್ಕೇಕ್ರಿಯೆಗಳಲ್ಲದೆ ಅಯ್ದನೆಯದನ್ನು ಆತನು ಬಯಸನು; ಬಯಸಬಾರದು.

## ವಿಶ್ವಜನಾಂಗದ ಅಂತಃಸತ್ವ !

ಕ್ರಿಯಾಲಿಂಗಾರ್ಚನದಿಂದ ಸರ್ವೇಂದ್ರಿಯಗಳು ತ್ರಿಕರಣಗಳು ಶುದಿಗೊಂಡು ಸಿದ್ಧವಾಗುವವು. ನಾಲಿಗೆ ಲಿಂಗಮಂತ್ರವನ್ನೆ ಜಪಿಸುತ್ತಿರುತ್ತದೆ. ಕಿವಿ ಮಂತ್ರಜಪನಾದವನ್ನೆ ಕೇಳುತ್ತಿರುತ್ತದೆ. ಮನ ಮಂತ್ರವನ್ನು ಮಂತ್ರಾರ್ಥವನ್ನು ಮಂತ್ರಮಯ ಮೂರ್ತಿಯನ್ನು ನೆನೆದು ಮನನಿಸುತ್ತದೆ. ಕಣ್ಣು ಲಿಂಗರೂಪವನ್ನೆ ಕಾಣುತ್ತಿರುತ್ತದೆ. ತ್ವಕ್ಕು ಲಿಂಗಸ್ಪರ್ಶದಲ್ಲಿಯೇ ನಿರ್ವಿಕಾರಿಯಾಗಿರುತ್ತದೆ. ಇದರಿಂದ ಮನವು ನಿರ್ವಿಕಾರಿ ನಿಸ್ಪೃಹಿ ಆಗುತ್ತದೆ. ಮೂಗು ಲಿಂಗಕ್ಕೆ ಧರಿಸಿದ ಪ್ರಸಾದ ಪುಷ್ಪ ಪರಿಮಳವನ್ನೇ ಮೂಸತ್ತದೆ. ಸರ್ವೇಂದ್ರಿಯ ಪುಷ್ಟಿ ತುಷ್ಟಿಗಳನ್ನು ತರುತ್ತದೆ, ಅಲ್ಲದೆ ಆ ಲಿಂಗಪ್ರಸಾದ ಪುಷ್ಪಗಳ ಮರಂದವನ್ನು ನಾಲಿಗೆ ಸೂಕ್ಷ್ಮವಾಗಿ ಸ್ವೀಕರಿಸಿ ಬೇನೆ ಬೇಸರಿಕೆಗಳು ಬಾರದಂತೆ ಇರಿಸುತ್ತದೆ. ಪ್ರಸಾದಪುಷ್ಪಗಳ ಪ್ರಸನ್ನ ರೂಪಗಳನ್ನು ಕಣ್ಣು ಕಂಡು ಅಪ್ರಸನ್ನ ರೂಪುಗಳಿಗೆಳಸದಂತಿರುತ್ತವೆ. ಕೈಕಾಲು ವಾಣಿಮೊದಲಾದ ಕರ್ಮೇಂದ್ರಿಯಗಳು ಅತ್ತಿತ್ತ ಚಲಿಸದೆ ಇರುತ್ತವೆ, ವಾಣಿ ಮಂತ ಜಪದಲ್ಲಿ ಲೀನವಾಗಿ ಮೌನವಾಗಿರುತ್ತದೆ, ಚಿತ್ತ ಬುದ್ಧಿ ಮನ ಭಾವಗಳು ಸದ್ರೂಪ ಲಿಂಗದಲ್ಲಿ ಸತ್ತೆಯನ್ನು ಪಡೆದಿರುತ್ತವೆ ಇದರಿಂಧಾಗಿ ಇದು ನಿತ್ಯದಲ್ಲಿ ಸುಪ್ರಭಾತದಲ್ಲಿ ನಡೆವ ಅಧ್ಯಾತ್ಮ ಚಿಕಿತ್ಸೆಯಾಗಿ ಅಪಮೃತ್ಯುಗಳು ತಪ್ಪುತ್ತವೆ. ಮತ್ತು ಈ ಕಾರಣಗಳಿಂದ ಕ್ರಿಯಾಲಿಂಗ ಪೂಜೆ ಉಳಿದ ಯಜ್ಞಾದಿ ಕರ್ಮಗಳಿಗಿಂತ ಕೋಟಿ ಕೋಟಿ ಪಾಲು ಮೇಲು. ಕ್ರಿಯಾಲಿಂಗಾರ್ಚಕನು ವಿಭೂತಿ ರುದ್ರಾಕ್ಷಿ ಪಾದೋದ ಪ್ರಸಾದ ನಿಷ್ಠನಾಗಿರುವುದರಿಂದ ಬೇರೆ ಬಯಕೆಗಳಿಗೆ ಬಲಿಯಾಗನು. ಆಶೆ ಅತಿಯಾಶೆಗಳಿಗೆ ಒಳಗಾಗದೆ ಸಹಜವಾಗಿ ಬಂದುದರಲ್ಲಿಯೇ ಸಂತೃಪ್ತನಾಗಿರುತ್ತಾನೆ. ಬಡವ ಬಲ್ಲಿದರಲ್ಲಿ ಎಲ್ಲ ಜೀವಿಗಳಲ್ಲಿ ಸಮದರ್ಶಿಯೂ ಸಮವರ್ತಿಯೂ ಆಗಿರುತ್ತಾನೆ. ತಾನು ಆ ಲಿಂಗಾನಂದದಲ್ಲಿ ಪರವಶನಾಗಿರುತ್ತಾನೆ. ಧ್ಯಾನ, ಜ್ಞಾನಾರ್ಜನ, ಕ್ರಿಯಾವರ್ತನ, ಏಕಾಂತವಾಸ ಈ ನಾಲ್ಕನ್ನಲ್ಲದೆ ಮತ್ತೊಂದನ್ನು ಮಾಡನು, ನೋಡನು, ನೆನೆಯನು, ನಿರ್ಮಮನು ನಿರಹಂಕಾರಿಯು ನಿಶ್ಚಲನು ನಿರ್ಮಲನು ಆಗಿರುತ್ತಾನೆ. ಸ್ವಸ್ವರೂಪ ಸಂಪನ್ನನಾಗಿರುತ್ತಾನೆ.

## ವಿಶ್ವಜನಾಂಗದ ಅಂತಃಸತ್ವ !

"ಕಾಮಕ್ರೋಧಾದಿ ನಿರ್ಮುಕ್ತಃ ಶಾಂತಿದಾಂತಿ ಸಮನ್ವಿತ ।
ಸಮಬುದ್ಧ್ಯಾಚರೇದ್ಯೋಗೀ ಸರ್ವತ್ರ ಶಿವಬುದ್ಧಿಮಾನ್ ॥
ಇದಂ ಮುಖ್ಯಮಿದಂಹೀನಮಿತಿ ಚಿಂತಾಮಕಲ್ಪಯನ್।
ಸರ್ವತ್ರಸಂಚರೇದ್ಯೋಗೀ ಸರ್ವಂ ಬ್ರಹ್ಮೇತಿ ಭಾವಯನ್॥
ನ ಸನ್ಮಾನೇಷು ಸಂಪ್ರೀತಿಂ ನಾವಮಾನೇಷು ಚವ್ಯಥಾಂ।
ಕುರ್ವಾಣಃ ಸಂಚರೇದ್ಯೋಗೀಕೂಟಸ್ಥೋ ಸ್ವಾತ್ಮನಿ ಸ್ಥಿತಃ ॥
ಅಪ್ರಾಕೃತಗುಣೈಃಸ್ವೀಯೈಃ ಸರ್ವಂ ವಿಸ್ಮಾಪಯನ್ ಜನಂ।
ಅದ್ವೈತ ಪರಮಾನಂದಮುದಿತೋ ದೇಹಿವಚ್ಚರೇತ್॥
ನ ಪ್ರಪಂಚೇ ನದೇಹೇ ಚ ನ ಧರ್ಮೇ ನ ಚ ದುಷ್ಕೃತೇ।
ಗತವೈಷಮ್ಯಧೀರ್ಧೀರೋಯತಿಶ್ಚರತಿ ದೇಹಿವತ್॥
ಪ್ರಾಕೃತೈಶ್ವರ್ಯಸಂಪತ್ತಿಪರಾಙ್ಮುಖಮನಃಸ್ಥಿತಿಃ।
ಚಿದಾನಂದನಿಜಾತ್ಮಸ್ಥೋ ಮೋದತೇ ಮುನಿಪುಂಗವಃ॥

ಲಿಂಗತತ್ತ್ವಕ್ರಿಯಾವಂತ, ಲಿಂಗತತ್ತ್ವಜ್ಞಾನಿ, ಲಿಂಗತತ್ತ್ವಾನು ಭಾವಿಯು ತ್ರಿವಿಧಾಂಗಗಳಲ್ಲಿ ಸ್ವಸ್ವರೂಪಸಂಪನ್ನನಾಗಿರುವುದರಿಂದ ಕಾಮ ಕ್ರೋಧಾದಿ ಅರಿಷಡ್ವರ್ಗದಿಂದ ಮುಕ್ತನಾಗಿ ಶಾಂತಿದಾಂತಿ ಸಮನ್ವಿತನು, ಎಲ್ಲೆಲ್ಲಿ ಎಲ್ಲರಲ್ಲಿ ಸಮಬುದ್ಧಿ ಶಿವಬುದ್ಧಿಯುಳ್ಳವನು, ಮುಖ್ಯಾಮುಖ್ಯ ಭೇದವನ್ನು ಗಮನಿಸದಿರುವವನು, ಎಲ್ಲವೂ ಎಲ್ಲರೂ ಪರಶಿವಬ್ರಹ್ಮ ಸ್ವರೂಪವೆಂದು ಭಾವಿಸುವವನು, ಸನ್ಮಾನದಲ್ಲಿ ಸಂಪ್ರೀತಿ, ಅವಮಾನದಲ್ಲಿ ವ್ಯಥೆಗಳಿಲ್ಲದವನು, ಸ್ವಾತ್ಮಸ್ಥಿತನು ಕೂಟಸ್ಥನು, ತನ್ನ ಅಪ್ರಾಕೃತಗುಣ ಗಳಿಂದ ಎಲ್ಲರನ್ನು ಅಚ್ಚರಿಗೊಳಿಸುವವನು, ಶಿವಾದ್ವೈತ ಪರಮಾನಂದವುಳ್ಳ ವನು– ಆಗಿ ದೇಹಿಯಂತೆಯೇ ಎಲ್ಲೆಲ್ಲಿಯು ಸಂಚರಿಸುತ್ತಾನೆ. ಪ್ರಪಂಚದಲ್ಲಿ ದೇಹದಲ್ಲಿಧರ್ಮದಲ್ಲಿ ದುಷ್ಕಾರ್ಯದಲ್ಲಿ ವೈಷಮ್ಯಬುದ್ಧಿಯಿಲ್ಲದೆ ಧೀರಯತಿಯಾಗಿ ದೇಹಿ ಯಂತೆಯೇ ಸಂಚರಿಸುತ್ತಾನೆ. ಮತ್ತೂ ಪ್ರಾಕೃತ (ಭೌತಿಕ) ಐಶ್ವರ್ಯ,

ಚೂರ್ಣಭಾವ. ಈ ಚೂರ್ಣಾಹಂಭಾವವು ಪೂರ್ಣಾಹಂಭಾವವಾಗಬೇಕಾದರೆ ಶಿವೋಽಹಂ, ಗುರುರಹಂ,ಚರಾಚರ ವಿಶ್ವಮಹಂ ಎಂದು ತನ್ನಲ್ಲಿ ಸಮನ್ವಯಿಸಿ ಸಮ್ಯಕ್ಕಾಗಿ ಸಂವೇದನಿಸುವಿಕೆ ಯಾವನಲ್ಲಿ ಉಂಟಾಗುವುದೋ ಅದುವೆ ಪೂರ್ಣಾಹಂತೆ ಎಂದು ಎಣಿಸಲಾಗಿದೆ.

ಚಿದ್ರೂಪ ಆಧಾರಾಗ್ನಿಯಲ್ಲಿ ಭೇದದಿಂದುಂಟಾದ ಜಗತ್ತೆಂಬ ಹವಿಸ್ಸನ್ನು ಹೋಮಿಸುವಾತನೇ ಜ್ಞಾನಹೋಮಿ; ಆತನೇ ವಿಶ್ವಹವ್ಯ ಭೋಕ್ತೃ ಇದುವೇ ಸತ್ತಾನಂದ ಪ್ರಕಾಶಂವಾದ ಪರಾ ವಿದ್ಯೆ; ಪರಾಮುಕ್ತಿ; ಇದು ಈ ಜಗನ್ಮೋಹವನ್ನು ಮಾಣಿಸುವ ಮಹಾಶಕ್ತಿ !

ಇದು ಒಳಬೆಳಗಿನ ಆರಾಧನೆ. ಅಹಂಕಾರದ ಅಂಧಕಾರವನ್ನು ಬಾಹ್ಯದ ಭ್ರಾಂತಿಯನ್ನು ಬೆಳಗುವ ಪೂರ್ಣಾಹಂತೆಯ ಆರಾಧನೆ.ತನ್ನ ಗುರು ತನ್ನ ಶಿವ, ತನ್ನ ವಿಶ್ವ ಎಂದೆನ್ನದೆ ತಾನೆಗುರು ತಾನೆ ಶಿವ, ತಾನೆ ವಿಶ್ವ ಎಂಬುದಾಗಿ ಚನ್ನಾಗಿ ಅರಿದು ಅಳವಡಿಸಿಕೊಳ್ಳುವಿಕೆಯ ಪೂರ್ಣಾಹಂ ಎಂದು ವಿಭಾವಿಸುವ ಆರಾಧನೆ ವಿಶ್ವವನ್ನೆಲ್ಲ. ತನ್ನಮೂಲಾಧಾರದ ಚಿದಗ್ನಿಯಲ್ಲಿ ಹೋಮ ಮಾಡಿ ವಿಶ್ವವನ್ನೇ ಚಿನ್ಮಯವಾಗಿಸುವ ಆಗಿಸಿ ತಾನೆ ವಿಶ್ವಹವ್ಯ ಭೋಕ್ತೃವಾಗುವ ವಿಶ್ವಾರಾಧನೆ. ಇದುವೆ ಪರಾವಿದ್ಯೆ: ಇದರಿಂದ ಜಗನ್ಮೋಹ ಮುಕ್ತಿ. ಎಂತಹ ಭವ್ಯ ಭಾವನೆ, ವಿಶ್ವಾರಾಧನೆ. ಪೂರ್ಣಾಹಂ ಸಾಧನೆ ! ಅದು ಇದು ಎಂಬುದೇನೂ ಉಳಿಯದು. ತಾನು ತನ್ನದು ತನ್ನವರು ಎಂಬುದಿರದು. ಏನೆಲ್ಲವೂ ತಾನೆ ಆಗುವ ಅಖಂಡಯೋಗವಿದು. ಅಖಂಡ ಭಾವವಿದು. ಅಂತರ್ಭಾವವಿದು.

"ಪರಾನಂದಂ ಚಿದಾಕಾರಂ ಪರಬ್ರಹ್ಮೈವ ಕೇವಲಂ।
ಲಿಂಗಂ ಸದ್ರೂಪತಾಪನ್ನಂ ಲಕ್ಷ್ಯತೇ ವಿಶ್ವಸಿದ್ಧಯೇ ॥

ಇನ್ನು ಚಿತ್ ಆದಂತೆ ಸತ್ ಆದುದನ್ನು ಆಗುವಿಕೆಯನ್ನು ಅನುಲಕ್ಷಿಸಿದ್ದಾನೆ ಶಿವಾಚಾರ್ಯ ಮಹಾನುಭಾವಿ !

## ವಿಶ್ವಜನಾಂಗದ ಅಂತಃಸತ್ತ್ವ !

ಚಿದಾಕಾರವೂ ಪರಾನಂದವೂ ಕೇವಲವೂ ಆದ ಆ ಪರಬ್ರಹ್ಮವೆ ಸದ್ರೂಪವನ್ನು ಪಡೆದು ಲಿಂಗವಾಗುತ್ತದೆ ವಿಶ್ವಸಿದ್ಧಿಗಾಗಿ ! ಅಂದರೆ ಶಿವೆ ಕುರುಹಾಗಿ ಕರಿಗೊಳ್ಳುವುದಾದರೂ ಬೇರಾವುದಕ್ಕಲ್ಲ ವಿಶ್ವಸಿದ್ಧಿಗಾಗಿ! ಜ್ಞಾನಲಿಂಗವು ಕ್ರಿಯಾಲಿಂಗವಾಗಿ ಪರಿಣಮಿಸುತ್ತದೆ ಗುರುಕಾರುಣ್ಯದಿಂದ ವಿಶ್ವಜೀವನ ಶುದ್ಧಿಗಾಗಿ ಸಿದ್ಧಿಗಾಗಿ! ಲಿಂಗ ಭೋಗೋಪಭೋಗಕ್ಕಾಗಿ! ಇದರಿಂದ ವಿಶ್ವಸಾರ್ಥಕತೆ ಸಂಪಾದಿತವಾಗುತ್ತದೆ. ಕ್ರಿಯಾಯೋಗವಿಲ್ಲದೆ ಕರ್ಮ ಸತ್ಯಶುದ್ಧಕಾಯಕವಾಗದು; ಕಾಯಯೋಗವಾಗದು. ಖಚಿತ ಮೌಲ್ಯ ಬಾರದು. ಕ್ರಿಯಾಲಿಂಗ ಪೂಜೆಗೆ ಸರಿಮಿಗಿಲಿಲ್ಲ.

"ಯಜ್ಞಾದಯಃ ಕ್ರಿಯಾಃ ಸರ್ವಾ ಲಿಂಗಪೂಜಾಂಶಸಮ್ಮಿತಾಃ।
ಇತಿ ಯತ್ಪೂಜ್ಯತೇ ಸಿದ್ಧೈಸ್ತತ್ಕ್ರಿಯಾಲಿಂಗಮುಚ್ಯತೇ॥
ಯದೃಚ್ಛಾಲಾಭಸಂತುಷ್ಟೋ ಜಿತೇಂದ್ರಿಯಃ।
ಸಮವೃತ್ತಿರ್ಭವೇದ್ಯೋಗೀ ಭಿಕ್ಷುಕೇ ವಾನೃಪೇಽಥ ವಾ॥
ಪಶ್ಯನ್ ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವಶಃ।
ಸ್ಮಯಮಾನಃ ಪರಾನಂದೇ ಲೀನಾತ್ಮಾ ವರ್ತತೇ ಸುಧೀಃ।
ಧ್ಯಾನಂ ಶೈವಂ ತಥಾ ಜ್ಞಾನಂ ಕ್ರಿಯಾ ಚೈಕಾಂತಶೀಲತಾ।
ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ॥" —ರೇ. ಗೀತೆ

ಯಜ್ಞಾದಿ ಜಪಕರ್ಮಗಳೆಲ್ಲವು ಕ್ರಿಯಾಲಿಂಗ ಪೂಜಾಂಶವುಳ್ಳವೆಂದು ತಿಳಿದು ಶುದ್ಧಸಿದ್ಧರು ಪೂಜಿಸುವುದೆ ಕ್ರಿಯಾಲಿಂಗ! ಸಹಜವಾಗಿ ಬಂದುದರಲ್ಲಿಯೇ ಅಂದರೆ ಬಯಸದೆ ಬಂದುದರಲ್ಲಿಯೇ ಸಂತುಷ್ಟನಾಗಿ ಭಸ್ಮನಿಷ್ಠವಾಗಿ ಜಿತೇಂದ್ರಿಯನಾಗಿ, ಭಿಕ್ಷುಕನಲ್ಲಿ ಭೂಪತಿಯಲ್ಲಿ ಸಮಬುದ್ಧಿಯಿಂದ ವರ್ತಿಸುವವನೇ ಕ್ರಿಯಾಯೋಗಿ. ಸಂಸಾರದಲ್ಲಿರುವ ಸರ್ವ ಪ್ರಾಣಿಗಳನ್ನು ಎಲ್ಲ ಬಗೆಯಲ್ಲಿ ಕಾಣುವವನಾಗಿ ಪರಾನಂದದಲ್ಲಿ ತಲ್ಲೀನನಾಗಿ ತನ್ನಿಂದತಾನೆ ಇರುವಾತನೆ ಬುದ್ಧಿವಂತನು. ಆತನಿಗೆ ಶಿವಧ್ಯಾನ, ಶಿವಜ್ಞಾನ ಶಿವಕ್ರಿಯೆ, ಏಕಾಂತ ಶೀಲತೆ ಈ ನಾಲ್ಕೇಕ್ರಿಯೆಗಳಲ್ಲದೆ ಅಯ್ದನೆಯದನ್ನು ಆತನು ಬಯಸನು; ಬಯಸಬಾರದು.

## ವಿಶ್ವಜನಾಂಗದ ಅಂತಃಸತ್ವ !

ಕ್ರಿಯಾಲಿಂಗಾರ್ಚನದಿಂದ ಸರ್ವೇಂದ್ರಿಯಗಳು ತ್ರಿಕರಣಗಳು ಶುದ್ಧಿಗೊಂಡು ಸಿದ್ಧವಾಗುವವು. ನಾಲಿಗೆ ಲಿಂಗಮಂತ್ರವನ್ನೆ ಜಪಿಸುತ್ತಿರುತ್ತದೆ. ಕಿವಿ ಮಂತ್ರಜಪನಾದವನ್ನೆ ಕೇಳುತ್ತಿರುತ್ತದೆ. ಮನ ಮಂತ್ರವನ್ನು ಮಂತ್ರಾರ್ಥವನ್ನು ಮಂತ್ರಮಯ ಮೂರ್ತಿಯನ್ನು ನೆನೆದು ಮನನಿಸುತ್ತದೆ. ಕಣ್ಣು ಲಿಂಗರೂಪವನ್ನೆ ಕಾಣುತ್ತಿರುತ್ತದೆ. ತ್ವಕ್ಕು ಲಿಂಗಸ್ಪರ್ಶದಲ್ಲಿಯೇ ನಿರ್ವಿಕಾರಿಯಾಗಿರುತ್ತದೆ. ಇದರಿಂದ ಮನವು ನಿರ್ವಿಕಾರಿ ನಿಸ್ಪೃಹಿ ಆಗಿರುತ್ತದೆ. ಮೂಗು ಲಿಂಗಕ್ಕೆ ಧರಿಸಿದ ಪ್ರಸಾದ ಪುಷ್ಪ ಪರಿಮಳವನ್ನೇ ಮೂಸುತ್ತದೆ. ಸರ್ವೇಂದ್ರಿಯ ಪುಷ್ಟಿ ತುಷ್ಟಿಗಳನ್ನು ತರುತ್ತದೆ, ಅಲ್ಲದೆ ಆ ಲಿಂಗಪ್ರಸಾದ ಪುಷ್ಪಗಳ ಮರಂದವನ್ನು ನಾಲಿಗೆ ಸೂಕ್ಷ್ಮವಾಗಿ ಸ್ವೀಕರಿಸಿ ಬೇನೆ ಬೇಸರಿಕೆಗಳು ಬಾರದಂತೆ ಇರಿಸುತ್ತದೆ. ಪ್ರಸಾದಪುಷ್ಪಗಳ ಪ್ರಸನ್ನ ರೂಪಗಳನ್ನು ಕಣ್ಣು ಕಂಡು ಅಪ್ರಸನ್ನ ರೂಪುಗಳಿಗೆಳಸದಂತಿರುತ್ತವೆ. ಕೈಕಾಲು ವಾಣಿಮೊದಲಾದ ಕರ್ಮೇಂದ್ರಿಯಗಳು ಅತ್ತಿತ್ತ ಚಲಿಸದೆ ಇರುತ್ತವೆ. ವಾಣಿ ಮಂತ್ರ ಜಪದಲ್ಲಿ ಲೀನವಾಗಿ ಮೌನವಾಗಿರುತ್ತದೆ, ಚಿತ್ತ ಬುದ್ಧಿ ಮನ ಭಾವಗಳು ಸದ್ರೂಪ ಲಿಂಗದಲ್ಲಿ ಸತ್ತೆಯನ್ನು ಪಡೆದಿರುತ್ತವೆ ಇದರಿಂಧಾಗಿ ಇದು ನಿತ್ಯದಲ್ಲಿ ಸುಪ್ರಭಾತದಲ್ಲಿ ನಡೆವ ಅಧ್ಯಾತ್ಮ ಚಿಕಿತ್ಸೆಯಾಗಿ ಅಪಮೃತ್ಯುಗಳು ತಪ್ಪುತ್ತವೆ. ಮತ್ತು ಈ ಕಾರಣಗಳಿಂದ ಕ್ರಿಯಾಲಿಂಗ ಪೂಜೆ ಉಳಿದ ಯಜ್ಞಾದಿ ಕರ್ಮಗಳಿಗಿಂತ ಕೋಟಿ ಕೋಟಿ ಪಾಲು ಮೇಲು. ಕ್ರಿಯಾಲಿಂಗಾರ್ಚಕನು ವಿಭೂತಿ ರುದ್ರಾಕ್ಷ ಪಾದೋದ ಪ್ರಸಾದ ನಿಷ್ಠನಾಗಿರುವುದರಿಂದ ಬೇರೆ ಬಯಕೆಗಳಿಗೆ ಬಲಿಯಾಗನು, ಆಶೆ ಅತಿಯಾಶೆಗಳಿಗೆ ಒಳಗಾಗದೆ ಸಹಜವಾಗಿ ಬಂದುದರಲ್ಲಿಯೇ ಸಂತೃಪ್ತನಾಗಿರುತ್ತಾನೆ. ಬಡವ ಬಲ್ಲಿದರಲ್ಲಿ ಎಲ್ಲ ಜೀವಿಗಳಲ್ಲಿ ಸಮದರ್ಶಿಯೂ ಸಮವರ್ತಿಯೂ ಆಗಿರುತ್ತಾನೆ. ತಾನು ಆ ಲಿಂಗಾನಂದದಲ್ಲಿ ಪರವಶನಾಗಿರುತ್ತಾನೆ. ಧ್ಯಾನ, ಜ್ಞಾನಾರ್ಜನ, ಕ್ರಿಯಾವರ್ತನ, ಏಕಾಂತವಾಸ ಈ ನಾಲ್ಕನ್ನಲ್ಲದೆ ಮತ್ತೊಂದನ್ನು ಮಾಡನು, ನೋಡನು, ನೆನೆಯನು, ನಿರ್ಮಮನು ನಿರಹಂಕಾರಿಯು ನಿಶ್ಚಲನು ನಿರ್ಮಲನು ಆಗಿರುತ್ತಾನೆ. ಸ್ವಸ್ವರೂಪ ಸಂಪನ್ನನಾಗಿರುತ್ತಾನೆ.

## ವಿಶ್ವಜನಸಾಂಗದ ಅಂತಃಸತ್ವ !

"ಕಾಮಕ್ರೋಧಾದಿ ನಿರ್ಮುಕ್ತಃ ಶಾಂತಿದಾಂತಿ ಸಮನ್ವಿತ ।
ಸಮಬುದ್ಧ್ಯಾಚರೇದ್ಯೋಗೀ ಸರ್ವತ್ರ ಶಿವಬುದ್ಧಿಮಾನ್ ॥
ಇದಂ ಮುಖ್ಯಮಿದಂಹೀನಮಿತಿ ಚಿಂತಾಮಕಲ್ಪಯನ್।
ಸರ್ವತ್ರಸಂಚರೇದ್ಯೋಗೀ ಸರ್ವಂ ಬ್ರಹ್ಮೇತಿ ಭಾವಯನ್॥
ನ ಸನ್ಮಾನೇಷು ಸಂಪ್ರೀತಿಂ ನಾವಮಾನೇಷು ಚವ್ಯಥಾಂ।
ಕುರ್ವಾಣಃ ಸಂಚರೇದ್ಯೋಗೀಕೂಟಸ್ಥೋ ಸ್ವಾತ್ಮನಿ ಸ್ಥಿತಃ॥
ಅಪ್ರಾಕೃತಗುಣೈಃಸ್ವೀಯೈಃ ಸರ್ವಂ ವಿಸ್ಮಾಪಯನ್ ಜನಂ।
ಅದ್ವೈತ ಪರಮಾನಂದಮುದಿತೋ ದೇಹಿವಚ್ಚರೇತ್॥
ನ ಪ್ರಪಂಚೇ ನದೇಹೇ ಚ ನ ಧರ್ಮೇ ನ ಚ ದುಷ್ಕೃತೇ।
ಗತವೈಷಮ್ಯಧೀರ್ಧೀರೋಯತಿಶ್ಚರತಿ ದೇಹಿವತ್॥
ಪ್ರಾಕೃತೈಶ್ವರ್ಯಸಂಪತ್ತಿಪರಾಙ್ಮುಖಮನಃಸ್ಥಿತಿಃ।
ಚಿದಾನಂದನಿಜಾತ್ಮಸ್ಥೋ ಮೋದತೇ ಮುನಿಪುಂಗವಃ॥

ಲಿಂಗತತ್ತ್ವಕ್ರಿಯಾವಂತ, ಲಿಂಗತತ್ತ್ವಜ್ಞಾನಿ, ಲಿಂಗತತ್ತ್ವನು ಭಾಷಿಯು ತ್ರಿವಿಧಾಂಗಗಳಲ್ಲಿ ಸ್ವಸ್ವರೂಪಸಂಪನ್ನನಾಗಿರುವುದರಿಂದ ಕಾಮ ಕ್ರೋಧಾದಿ ಅರಿಷಡ್ವರ್ಗದಿಂದ ಮುಕ್ತನಾಗಿ ಶಾಂತಿದಾಂತಿ ಸಮನ್ವಿತನು, ಎಲ್ಲೆಲ್ಲಿ ಎಲ್ಲರಲ್ಲಿ ಸಮಬುದ್ಧಿ ಶಿವಬುದ್ಧಿಯುಳ್ಳವನು, ಮುಖ್ಯಾಮುಖ್ಯ ಭೇದವನ್ನು ಗಮನಿಸದಿರುವವನು, ಎಲ್ಲವೂ ಎಲ್ಲರೂ ಪರಶಿವಬ್ರಹ್ಮ ಸ್ವರೂಪವೆಂದು ಭಾವಿಸುವವನು, ಸನ್ಮಾನದಲ್ಲಿ ಸಂಪ್ರೀತಿ, ಅವಮಾನದಲ್ಲಿ ವ್ಯಥೆಗಳಿಲ್ಲದವನು, ಸ್ವಾತ್ಮಸ್ಥಿತನು ಕೂಟಸ್ಥನು, ತನ್ನ ಅಪ್ರಾಕೃತಗುಣ ಗಳಿಂದ ಎಲ್ಲರನ್ನು ಆಶ್ಚರ್ಯಗೊಳಿಸುವವನು, ಶಿವಾದ್ವೈತ ಪರಮಾನಂದವುಳ್ಳ ವನು– ಆಗಿ ದೇಹಿಯಂತೆಯೇ ಎಲ್ಲೆಲ್ಲಿಯು ಸಂಚರಿಸುತ್ತಾನೆ ಪ್ರಪಂಚದಲ್ಲಿ ದೇಹದಲ್ಲಿಧರ್ಮದಲ್ಲಿ ದುಷ್ಕಾರ್ಯದಲ್ಲಿ ವೈಷಮ್ಯಬುದ್ಧಿಯಿಲ್ಲದೆ ಧೀರಯತಿಯಾಗಿ ದೇಹಿ ಯಂತೆಯೇ ಸಂಚರಿಸುತ್ತಾನೆ. ಮತ್ತೂ ಪ್ರಾಕೃತ (ಭೌತಿಕ) ಐಶ್ವರ್ಯ,

ಸಂಪತ್ತಿಗಳಲ್ಲಿ ಮುಖಿಮನಗಳಿಲ್ಲದವನಾಗಿ ಮುನಿಪುಂಗವನಾಗಿ ಚಿದಾನಂದ ಭರಿತ ನಿಜಾತ್ಮಸ್ಥನಾಗಿ ಪ್ರಮೋದಿಸುತ್ತಾನೆ.

ಲಿಂಗತತ್ತ್ವಾನುಭಾವಿ ಲೋಕಸಂಚಾರವನ್ನು ಲೋಕಕಲ್ಯಾಣಕ್ಕಾಗಿ ಮಾಡುವನಲ್ಲದೆ ದೇವನನ್ನು ಬೆದಕುವುದಕ್ಕಾಗಿ ಸ್ವಾರ್ಥಕಲ್ಯಾಣಕ್ಕಾಗಿ ಸಂಚರಿಸುವುದಿಲ್ಲ. ಲಿಂಗತತ್ತ್ವಾನುಷ್ಠಾನದಿಂದ ತಾನೇ ಲಿಂಗ (ದೇವ) ಸ್ವರೂಪನಾಗಿರುವಾಗ ಇನ್ನೆಲ್ಲಿ ಇನ್ನಾವ ದೇವನನ್ನು ಹುಡುಕಬೇಕು ? ಅಲ್ಲದೆ ಕಂಡದ್ದೆಲ್ಲವನ್ನು ಕಂಡವರೆಲ್ಲರನ್ನು ಲಿಂಗದೇವ ಸ್ವರೂಪವೆಂದು ಭಾವಿಸುವಾತನಿಗೆ ಇನ್ನಾವ ಭಾವನೆಗಳು ಆಶೋತ್ತರಗಳು ಇರಲು ಸಾಧ್ಯ ? ಮದ ಮತ್ಸರಗಳಿಲ್ಲಾಗಿ ಧೀರಯತಿಯಾಗಿ ಧೀರಮತಿಯಾಗಿ ಸಂಚರಿಸುತ್ತಾನೆ ಸರ್ವರ ಏಳ್ಗೆಗಾಗಿ! ಸರ್ವೋದ್ಧಾರವೇ ಲಿಂಗಾನುಭಾವಿಯ ಧ್ಯೇಯ ಈ ಭೌತಿಕ ಸಂಪತ್ತಿಗಾಗಿ ಬಾಯ್ನೀರು ಬಿಡುವವನಲ್ಲ. ಮನ ಸೋಲುವವನಲ್ಲ. ಜಿತೇಂದ್ರಿಯನಾಗಿ ಜೀವನ್ಮುಕ್ತನಾಗಿ ಶಾಶ್ವತ ಚಿದಾನಂದತುಂದಿಲನಾಗಿ ಸಂಚರಿಸುವನು. ಇದಿಷ್ಟೇ ಅಲ್ಲ, ಇನ್ನೂ ಕೇಳಿ, ಲಿಂಗಯೋಗಿ ಲಿಂಗಾನುಭಾವಿಯ ಲಿಂಗಸ್ವರೂಪಸ್ಥಿತಿ–ಗತಿಗಳನ್ನು:

"ಸ್ವಯಮೇವ ಸ್ವಯಂಭೂತ್ವಾ ಚರತಃ ಸ್ವಸ್ವರೂಪತಃ।
ಪರಂ ನಾಸ್ತೀತಿ ಬೋಧಸ್ಯ ಪರತ್ವಮಭಿಧೀಯತೇ॥
ಸ್ವತಂತ್ರಃ ಸರ್ವಕೃತ್ಯೇಷು ಸ್ವಪರತ್ವೇನ ಭಾವಿತಃ।
ತೃಣೀಕುರ್ವನ್ ಜಗಜ್ಜಾಲಂ ವರ್ತತೇ ಶಿವಯೋಗಿರಾಟ್॥
ವರ್ಣಾಶ್ರಮ ಸದಾಚಾರಮಾರ್ಗನಿಷ್ಠಾ ಪರಾಙ್ಮುಖಃ।
ಸರ್ವೋತ್ಕೃಷ್ಟಂ ಸ್ವಮಾತ್ಮಾನಂ ಪಶ್ಯನ್ ಯೋಗೀತು ಮೋದತೇ॥ ...."

— ರೇ. ಗೀತೆ

ಸ್ವಸ್ವರೂಪದ ಪರಾಪರ ಸ್ವರೂಪದ ಚರಾಚರ ಸ್ವರೂಪದ ಸಾಕ್ಷಾತ್ಕಾರದ ಭಾವಾನುಭಾವಗಳ ಎಟುಕದ ಎತ್ತರದ ನಿಲವು ಒಲವುಗಳನ್ನಿಲ್ಲಿ ನಿರೀಕ್ಷಿಸಬೇಕು ಆ ನಿಲವಿಗರಾಗಿ, ಆ ಒಲವಿಗರಾಗಿ!

ವಿಶ್ವಜನಾಂಗದ ಅಂತಃಸತ್ವ !

ಕಾವ್ಯಸ್ಫೂರ್ತಿಯನ್ನು ಹರಿಸುವಂತೆ ಕ್ರಿಯಾಸ್ಫೂರ್ತಿ ಉನ್ಮೇಷಿಸ ಲಾಗಿದೆ. ಪರತ್ವ ಪರಿಸ್ಫೂರ್ತಿ ಪರಿಚರಿಸಿದೆ. ಚಾರಿತ್ರಿಕ ಚಾರುಸ್ಫೂರ್ತಿ ಕ್ರಾಂತಿಕಾರಿಯಾಗಿ ಉಜ್ವಲಿಸಿದೆ "ಸ್ವಯಮೇವ ಸ್ವಯಂಭೂತ್ವಾ .." ಎಂಬಲ್ಲಿ ಕ್ರಾಂತದರ್ಶಿತ್ವ ಸ್ವಾಂತಸ್ಪರ್ಶಿಯಾಗಿ ಸಂದರ್ಶಿತವಾಗಿವೆ. ಶಬ್ದಾಲಂ ಕಾರ ಅರ್ಥಾಲಂಕಾರ ಭಾವಾಲಂಕರಗಳು ಮಹಾಕವಿಗಳ ಮನೋಬಗುವಂತೆ ಮಂಡಿತವಾಗಿವೆ. ಶೈಲಿ, ಯಮಕ ಛೇಕಾನುಪ್ರಾಸಗಳು ತೊರೆಯ ತರಂಗ ಮಾಲೆಗಳ ಚಲುವನ್ನು ಹೋಲಿವೆ.

ಸ್ವಯ–ಚರ–ಪರಗಳ ಪ್ರಬೋಧಭಾವಾತೀತ; ಭಾಷಾತೀತ. ಅದರ ವಿವೇಚನೆ ಮಾಡಲು ನಮ್ಮ ಶಕ್ತಿ ನಮ್ಮ ಉಕ್ತಿ ಏತಕ್ಕೂ ಸಾಲವು, ಶಿವಾ ಚಾರ್ಯ ಶಿವಮಹಾಕವಿಯ ಮಹಾನುಭಾವದ ಎತ್ತರಕ್ಕೆ ಏರೆವು; ಸಾರೆವು. ಸಚ್ಚಿಲ್ಲಿಂಗತತ್ತ್ವಾನುಭಾವಿ ತನ್ನಲ್ಲಿ ತಾನಾದಾಗ, ಸ್ವಸ್ವರೂಪದಲ್ಲಿ ಸಂಚರಿ ಸುವಾಗ ಪರವೇ ಇಲ್ಲವಾದಾಗ ಪ್ರಬೋಧದ ಪರತ್ವ ಅಭಿಧೇಯವಾದಾಗ ಇದೇನೂ ಆಗದ ಇದರ ಅನುಭವದ ಅಂಚನ್ನು ತಾಗದ ನಾವು ಈ ಬಗೆಗೆ ಏನನ್ನೂ ನುಡಿಯೆವು. ನೋಡಿ ನೋಡಿಸೆವು.

ಸ್ವಪರತ್ವಭಾವಿತನು ಸರ್ವಕೃತ್ಯಗಳಲ್ಲಿ ಸರ್ವಸ್ವತಂತ್ರನು: ಜಗಜ್ಜಾಲ ವನ್ನು ತೃಣೀಕರಿಸಿದಾತನು, ಶಿವಯೋಗಿ ಸಾರ್ವಭೌಮನಾಗಿರುತ್ತಾನೆ. ವರ್ಣಾ ಶ್ರಮಗತ ಸದಾಚಾರ ಮಾರ್ಗದಲ್ಲಿ ಮುನ್ನಡೆಯನು; ಮನಮಾಡನು. ಅಂಗೀ ಕರಿಸುವ ಸ್ವಾರಸ್ಯ ಸ್ವಾಸ್ಥ್ಯ ಆ ಮಾರ್ಗಕ್ರಮದಲ್ಲಿರದಾಗಿ ಅಲ್ಲಿನ ನಿಷ್ಠೆ ಯನ್ನು ನಿರಾಕರಿಸದಿರನು. ಸರ್ವೋತ್ಕೃಷ್ಟವಾದ ತನ್ನಾತ್ಮ ಸೌಂದರ್ಯವನ್ನು ನಿಟ್ಟಿಸುತ್ತ ಆ ಮಹಾಮಾಧುರ್ಯದಲ್ಲಿಯೇ ಪ್ರಮೋದಿಸುತ್ತಾನೆ.

ಶಿವಾಚಾರ್ಯನಲ್ಲಿ ವರ್ಣಾಶ್ರಮಕ್ರಾಂತಿ ಕಿಡಿಯನ್ನಿರಿಸಿದ್ದಾನೆ. ವರ್ಣಾ ಶ್ರಮಕ್ರಾಂತಿ ತುಂಬಾ ಪ್ರಾಚೀನ ! ವಜ್ರಸೂಚ್ಯುಪನಿಷತ್ ಇವಕ್ಕಾಗಿಯೇ

ವೀಸಲಾಗಿದೆ. ಆದ್ಯ ಶಿವಾಚಾರ್ಯರ ವರ್ಣಾಶ್ರಮಕ್ರಾಂತಿ ಆಗಮಗಳಲ್ಲಿ ಒಡ ಮೂಡಿದೆ. ಈ ಪಥದಲ್ಲಿ ಕಲ್ಯಾಣದ ಕ್ರಾಂತಿ ವಿಫಲವಾಯಿತು. ಪ್ರಾಚೀನ ದಿಂದ ಬಂದ ಕ್ರಾಂತಿಯನ್ನ ಕೈಗೆತ್ತಿಕೊಂಡರಾದರೂ ಸಫಲಗೊಳಿಸಲಾಗಲಿಲ್ಲ. ೧೨ ನೂರು ವರುಷಗಳ ಹಿಂದಿದ್ದ ಶಿವಯೋಗಿ ಶಿವಾಚಾರ್ಯನು ವರ್ಣಾಶ್ರಮ ಪಥ ಸಮರ್ಪಕವಲ್ಲೆಂಬುದನ್ನು ತನ್ನ ಸಿದ್ಧಾಂತ ಕೃತಿಯಲ್ಲಿ ಅಲ್ಲಲ್ಲಿ ಎತ್ತಿ ನಿರೂಪಿಸಿದ್ದಾನೆ. ಅತ್ಯಾಶ್ರಮ ವೀರಶೈವ ಪಥ ಸರ್ವೋತ್ಕೃಷ್ಟವೆಂಬುದನ್ನು ನಿರೂಪಿಸಿದ್ಧಾನೆ.

" ವಿಶ್ವಾತೀತಂ ಪರಂ ಬ್ರಹ್ಮ ಶಿವಾಖ್ಯಂ ಚಿತ್ಸ್ವರೂಪಕಂ ।
ತದೇವಾಹಮಿತಿ ಜ್ಞಾನೀ ಸರ್ವೋತ್ಕೃಷ್ಟ: ಸ ಉಚ್ಯತೇ ॥
ಅಚಲಂ ಧ್ರುವಮಾತ್ಮಾನ ಮನುಪಶ್ಯನ್ನಿರಂತರಂ ।
ನಿರಸ್ತವಿಶ್ವವಿಭ್ರಾಂತಿರ್ಜೀವನ್ಮುಕ್ತೋ ಭವೇನ್ಮುನಿ; ॥
ಬ್ರಹ್ಮಾದ್ಯಾ: ಕಿಂನುಕುರ್ವಂತಿ ದೇವತಾ: ಕರ್ಮಮಾರ್ಗಗಾಃ ।
ಕರ್ಮಾತೀತ ಪದಸ್ಥಸ್ಯ ಸ್ವಯಂ ಬ್ರಹ್ಮಸ್ವರೂಪಿಣಃ ॥
ಸ್ವೇಚ್ಛಯಾ ಸಂಚರನ್‌ಯೋಗೀ ವಿಮುಂಚನ್ ದೇಹಮಾನಿತಾಂ ।
ದರ್ಶನೈ: ಸ್ಪರ್ಶನೈ: ಸರ್ವಾನಜ್ಞಾನಪಿ ವಿಮೋಚಯೇತ್ ॥ ......"

ರೇ. ಗೀತೆ

ಲಿಂಗತತ್ತ್ವಾನುಭಾವಿಯು ವಿಶ್ವಾತೀತವೂ ಚಿತ್ ಸ್ವರೂಪವೂ ಆದ ಆ ಪರಶಿವ ಬ್ರಹ್ಮಸ್ವರೂಪವೇ ನಾನೆಂದು ಅರಿದು ಸಮ್ಯಕ್ ಜ್ಞಾನಿಯೆನಿಸಿ ಸರ್ವೋತ್ಕೃಷ್ಟನಾಗುತ್ತಾನೆ. ಚಲಿಸದೆ ಧ್ರುವವಾದ ತನ್ನನ್ನು ನಿರಂತರ ಅನ್ವೀಕ್ಷಿಸಿ, ವಿಶ್ವವಿಭ್ರಾಂತಿಯನ್ನು ತ್ಯಜಿಸಿ ಮುನಿಯಾಗಿ ಜೀವನ್ಮುಕ್ತನಾಗುತ್ತಾನೆ. 'ಮುನಿ' ಪದವು ವೀರಶೈವ ಸಂಪ್ರದಾಯ ಸೂಚಕವಾದುದು. ಕರ್ಮಾತೀತ ಪದಸ್ಥನೂ ಸ್ವಯಂ ಪರಶಿವ ಬ್ರಹ್ಮ ಸ್ವರೂಪನೂ ಆದ ಲಿಂಗತತ್ತ್ವಾನುಭಾವಿಗೆ ಕರ್ಮಮಾರ್ಗಗಾಮಿಗಳಾದ ಬ್ರಹ್ಮಾದಿ ದೇವತೆಗಳು ಏನನ್ನೂ ಮಾಡಲಾರರು; ಮಾಡಲು ಯಾವ ಅಳವಿಲ್ಲ. ದೇಹಾಭಿಮಾನವನ್ನು ಬಿಟ್ಟು

'ವಿಶ್ವಜನಾಂಗದ ಅಂತಃಸತ್ವ !

ಸ್ವೇಚ್ಛೆಯಾಗಿ ಅಂದರೆ ಯಾರ ಯಾವ ಹಂಗಿಲ್ಲದೆ ಸಂಚರಿಸುವ ಲಿಂಗ ಯೋಗಿಯು ತನ್ನ ದರ್ಶನ ಸ್ಪರ್ಶನಗಳಿಂದ ಎಲ್ಲ ಅಜ್ಞಾನಿಗಳನ್ನೂ ಸಹ ಮುಕ್ತರನ್ನಾಗಿಸುವನು.

ಸಚ್ಚಿಲ್ಲಿಂಗದ ಅಂತಃಸತ್ವ ಅಂತಹದು. ತನ್ನೊಳಗಿರುವ ಲೋಕವನ್ನೆ ಉದ್ಧಾರ ಮಾಡುವ ಊರ್ಜಿತಸತ್ವವುಳ್ಳುದು. ಪಂಚಕೃತ್ಯಕರ್ತೃವಾದ ಸಚ್ಚಿ ಲ್ಲಿಂಗಾರಾಧಕನೂ ಆ ಶಕ್ತಿವಂತನಾಗುತ್ತಾನೆ. ಅದರ ಆರಾಧನೆ ಲೋಕ ದಲ್ಲಿ ಅದೆಲ್ಲರಿಗೂ ಸಲ್ಲುವಂತಹುದು-ಜಗದಾಚಾರ್ಯರ ಕರುಣೆಯಿಂದ !

ಈ ವರೆಗಿನ ವಿವರಣೆಯನ್ನು ಒಟ್ಟಾರೆ ಈ ಒಂದು ಚರಮ ಶ್ಲೋಕ ದಲ್ಲಿ ಶಿವಾನುಭಾವಿ ಶಿವಾಚಾರ್ಯರನು ಸೂತ್ರೀಕರಿಸಿ ಸತ್ವಶಾಲಿಯಾಗಿ ನಿರೂ ಪಿಸಿದ್ದಾನೆ. ಅದಿದುಃ

"ನಿತ್ಯೇ ನಿರ್ಮಲ ಭಾವನೇ ನಿರುಪಮೇ ನಿರ್ಧೂತವಿಶ್ವಭ್ರಮೇ
ಸತ್ತಾನಂದ ಚಿದಾತ್ಮಕೇ ಪರಶಿವೇ ಸಾಮ್ಯಂಗತಃ ಸಂಯಮೀ।
ಪ್ರಧ್ವಸ್ತಾಶ್ರಮವರ್ಣಧರ್ಮನಿಗಲಃ ಸ್ವಚ್ಛಂದಸಂಚಾರವಾನ್
ದೇಹೇಽಪ್ಯದ್ಭುತವೈಭವೋ ವಿಜಯತೇ ಜೀವನ್ವಿಮುಕ್ತಃ ಸುಧೀಃ॥"

ಓ, ಕಾವ್ಯಧರ್ಮ ದಿವ್ಯಧರ್ಮ ಎರಡೂ ಕಾವೇರಿ (ಕಾವ್ಯವಿರಿ) ಈ ಪದ್ಯ ವಲ್ಲಿ ಕಳಕಳಿಸಿದೆ; ಪರಶಿವ ಲಿಂಗಧರ್ಮ ಅಂಗನಲ್ಲಿ ಸಂಗಮಿಸಿ ಕಂಗೊಳಿಸಿ ಅದ್ಭುತವಾಗಿ ವಿಶ್ವ ವೈಭವವಾಗಿ ವಿಜಯದಲ್ಲಿ ವಿಜೃಂಭಿಸಿದೆ. ವರ್ಣಾಶ್ರಮ ಧರ್ಮವೆಂಬ ಸರಪಳಿಯ ಸಂಕೋಲೆಯನ್ನು ಪ್ರಧ್ವಂಸಿಸಿ ಸ್ವಚ್ಛಂದ ಸಂಚಾರ ಸಂಭವಿಸಿದೆ. ಶಿವಯೋಗಿ ಶಿವಾಚಾರ್ಯ ಶಿವಕವಿಯ ಪರಿಸ್ಫೂರ್ತಿ ಸಮುಲ್ಲಾಸ ಸುಧಾತ್ಮಕ ಶ್ರೀಮಂತ ವಾಣಿಯಲ್ಲಿ ! ನಿತ್ಯ ನಿರ್ಮಲ ಭಾವ್ಯ ಭಾವದಲ್ಲಿ ಸತ್ಯ ಸ್ವರೂಪದಲ್ಲಿ ಸಚ್ಚಿಲ್ಲಿಂಗ ಧರ್ಮ, ಶಿವಾದ್ವೈತಸಾಮ್ಯ ಅದಮ್ಯ ಅನನ್ಯ ಧರ್ಮಿ ಯಾಗಿ ಸಂಯಮಿಯಾಗಿ ಸಂಚರಿಸಿದೆ ಸ್ವಚ್ಛಂದವಾಗಿ ವಿಜಯವಂತವಾಗಿ !

## ವಿಶ್ವ ಜನಾಂಗದ ಅಂತಃಸತ್ವ

ನಿತ್ಯನೂ ಅಂದರೆ ತ್ರಿಕಾಲಾಬಾಧಿತನೂ ನಿರ್ಮಲಭಾವನನೂ ನಿರುಪಮನೂ ವಿಶ್ವಭ್ರಾಂತಿ ವಿರಹಿತನೂ ಸಚ್ಚಿದಾನಂದಾತ್ಮಕನೂ ಆದ ಪರಶಿವನ ಸಾಮ್ಯವನ್ನು ಸಂಪಾದಿಸಿದ ಸ್ವಾಂಗಭಾವ ಸಂಯಮಿಯು ಜೀವನ್ಮುಕ್ತನಾಗಿ ವರ್ಣಾಶ್ರಮ ಧರ್ಮದೂರನಾಗಿ ದೇಹವಿದ್ದೂ ನಿರ್ದೇಹಿಯಾಗಿ ನಿರತಿಶಯ ವೈಭವಶಾಲಿಯಾಗಿ ಸ್ವಚ್ಛಂದ ಸಂಚಾರವಂತನಾಗಿ ವಿಶ್ವದಲ್ಲಿ ವಿಜಯಶಾಲಿಯಾಗಿ ವಿರಾಜಿಸುತ್ತಾನೆ. ಲಿಂಗತತ್ತ್ವವನ್ನು ವಿಶ್ವಜನಾಂಗದ ಅಂತಃಸತ್ವವೆಂಬುದನ್ನು ಶಿವಾಚಾರ್ಯನಾಗಿ ರೇಣುಕಗೀತೆಯ ಮೂಲಕ "ಅನುಗ್ರಹಾಯ ಲೋಕಾನಾಮಭ್ಯಧಾತ್ ಸುಧಿಯಾಂವರಃ" ಎಂಬಂತೆ ಲೋಕಾಭ್ಯುದಯಕ್ಕಾಗಿ ಸಾರಿದ್ದಾನೆ. ಸಾರುತ್ತಿದ್ದಾನೆ. ಕಿವಿಗೊಟ್ಟು ಮನವಿಟ್ಟು ಆಲಿಸುವವರು ಅದೆನಿಬರೋ !

ಕೊಟ್ಟ ಕೊನೆಯದಾಗಿ ಸ್ವಂತದ ಮತ್ತೊಂದು ಮಿಡಿನುಡಿ ಮಹಾವೀರಶೈವಧರ್ಮಮಾರ್ಗ ಪ್ರವರ್ತಕನಾದ ಶ್ರೀ ಶಿವಯೋಗಿ ಶಿವಾಚಾರ್ಯವರ್ಯರ ಕೃಪಾಬಲದಿಂದ ಶಿವಾಚಾರ್ಯ ಜೀವನದಲ್ಲಿ ನಮಗಿರುವ ಅಸಹಾಯಕತೆಯಲ್ಲಿಯೂ ನಿಷ್ಠೆ ಶಿವಾಚಾರ್ಯ ಸಿದ್ಧಾಂತ ಸಾಹಿತ್ಯದಲ್ಲಿ ಶ್ರದ್ಧೆ ಮೊಟಕಾಗದೆ ಮುನ್ನಡೆಯುತ್ತಿವೆ- ಎಂದ ಮಂದಗತಿಯಲ್ಲಿ ! ಮತ್ತು ಕುಂದು ಕುಂದು ಸ್ಥಿತಿಯಲ್ಲಿ!! ಶ್ರೀ ಜ. ಪಂಡಿತಾರಾಧ್ಯರ ಕಾಳಮುಖರ ಮೇಲಿನ ಶ್ವೇತಕ್ರಾಂತಿ, ಶ್ರೀ ಸಿದ್ಧನಾಥ ಶಿವಾಚಾರ್ಯರ ಶಿವಸಿದ್ಧಾಂತನಿರ್ಣಾಯಕ ಕ್ರಾಂತಿ ಮತ್ತು ವೀರಶೈವ ವಿಶಿಷ್ಟಾಕಾರಕಕ್ರಾಂತಿ, ವೀರಶಿವಾಚಾರ್ಯಕ್ರಾಂತಿ, ಶ್ರೀ ಶಿವಯೋಗಿ ಶಿವಾಚಾರ್ಯರ ಶಿವಾದ್ವೈತ ಸೈದ್ಧಾಂತಿಕ ಸಾಹಿತ್ಯಕ್ರಾಂತಿ ಮತ್ತು ಮಹಾವೀರ ಶೈವಧರ್ಮಮಾರ್ಗ ಪ್ರವರ್ತನ ಕ್ರಾಂತಿ, ಶ್ರೀ ಜ. ವಿರೂಪಾಕ್ಷ ದೇಶಿಕೇಂದ್ರದ ಭಾರತಾದ್ಯಂತ ವೀರಶೈವ ಪ್ರಸಾರ ಕ್ರಾಂತಿ, ಕಾಯಕ ಕ್ರಾಂತಿ (ಕಾಶ್ಮೀರದಲ್ಲಿ) ಶ್ರೀ ಜ. ಚಂದ್ರಗುಂಡ ಶಿವಾಚಾರ್ಯರ ಶ್ರೀಶೈಲ ಪೀಠದಲ್ಲಿ ಪ್ರಥಮ ಶಿವಾನುಭಾವಗೋಷ್ಠಿ (ಮಂಟಪ) ಕ್ರಾಂತಿ, ಹದಿನೆಂಟು ಜಾತಿಯ ಉದ್ಧಾರಕಕ್ರಾಂತಿ ಶ್ರೀ ಜ. ರೇವಣಸಿದ್ಧರ ಚಂಗಣಗಿಲ

## ವಿಶ್ವಜನಾಂಗದ ಅಂತ:ಸತ್ವ

ಮಂಟಪದ ಕ್ರಾಂತಿ ಮತ್ತು ಸೊಳ್ಳುಡಿಸೃಜನ ಕ್ರಾಂತಿ, ಶ್ರೀ ಉರಿಲಿಂಗ ಶಿವಾ ಚಾರ್ಯರ ನಿಮ್ನೋದ್ಧಾರಕ್ರಾಂತಿ ಮೊದಲಾದವುಗಳು ಅದ್ಭುತವಾದವುಗಳು. ಕಾಲಗರ್ಭದಲ್ಲಿ ಮುಚ್ಚಿಹೋಗಿವೆ ಪರಿಶೋಧಕರಿಲ್ಲದೆ ಪ್ರಚಾರ ಪರಿ ಶ್ರಮವಿಲ್ಲದೆ ಮಂಪರ ಮಂಪರವಾಗಿವೆ. ಅವರೆಲ್ಲರಿಂದ ಅನನ್ಯ ಸಾಧಾರಣ ವಾದ ಸಾಮಾಜಿಕ ಸಾಂಸ್ಕರಿಕ ಸಾಂಸ್ಕೃತಿಕ ಸೈದ್ಧಾಂತಿಕ ಪರಿವರ್ತನ ಅಪ್ರತಿ ಮವಾಗಿ ಪ್ರತಿಭಾನ್ವಿತವಾಗಿ ನಡೆದಿವೆ. ಗರ್ಭಗುಡಿಯ ನಂದಾದೀಪದಂತೆ ದೀಪಿಸುತ್ತಿವೆ. ನೆಲದ ಮರೆಯ ನಿಧಾನದಂತೆ ನಿಂತು ಹೋಗಿವೆ. ಅವ ನ್ನೆಲ್ಲ ಹೊರದೆಗೆದು ಪರವಾಗಿ ಸಾಹಿತ್ಯ ಮಾಧ್ಯಮದಲ್ಲಿ ಹರಡಿ ಜೀವ ನದ ಸಾರ್ಥಕತೆಯನ್ನು ಪಡೆಯಲು ಆದ್ಯ ಶಿವಾಚಾರ್ಯರಿಂದ ಅಂತ:ಪ್ರೇರಣೆ ಅತ್ಯಂತವಾಗುತ್ತಿದೆ. ಇದರ ಫಲವಾಗಿಯೇ ಈ ದಿಸೆಯ ಪಥದಲ್ಲಿ ಅಂಬೆ ಗಾಲನ್ನಿಡಲಾಗುತ್ತಿದೆ. ಆದರೆ ದಾರಿ ದೂರ ಬಹುದೂರ. ಗುರಿ ನಿರಿಗಳಿಗೆ ಮುಟ್ಟುವುದೆಂದಿಗೆ ? ಮುಟ್ಟಿ ಶಿವಾಚಾರ್ಯರ ಕ್ರಾಂತಿಕಾರಕ ಚರಿತ್ರೆಗೆ, ಚರಿತ್ರೆಯನ್ನು ರೂಪಿಸಿದ ಶಿವಾಚಾರ್ಯ ಚೆತನ್ಯಗಳಿಗೆ ತುಂಬು ಗಾಣಿಕೆ ಯನ್ನು ಸಲ್ಲಿಸುವುದೆಂದಿಗೆ ? ನಮ್ಮ ನಡಿಗೆ ಮಂದ; ಇದರಿಂದ ನಮಗಿಲ್ಲ ಆನಂದ. ಅತ್ತಪ್ರಾಕ್ ಸಂಶೋಧನೆಯ ಸಂಸ್ಥೆಯ ಕೆಲಸ; ಇತ್ತ ಶಿವಾ ಚಾರ್ಯರ ಮಣಿಹಗಳ ಸಾಹಿತ್ಯದ ಅಧ್ಯಯನ ಪೀಠದ ಕೆಲಸ. ಸಾಲದ್ದಕ್ಕೆ 'ಮಾಮಿಡಿ' ಮೂರ್ತಿ ಗಳೋಲೆಯ ಮತ್ತೂ ಹೊತ್ತಗೆಗಳ ಬರೆಹ ಬದುಕು. ಬಿಡುವಿಲ್ಲದ ಬಾಳು–ಬದುಕು. ಮೇಲಾಗಿ ಮುಪ್ಪಿನ ಹೊತ್ತು; ಸೊತ್ತಿನ ಮುಗ್ಗಟ್ಟು ಒಂಟಿ ಜೀವ. ಆದರೂ ಆತ್ಮವಿಶ್ವಾಸಕ್ಕೆ ಕುಂದಿಲ್ಲ. ಅದೇ ಮೂಲ ಮುಖ್ಯ ನಿಧಿಯಾಗಿದೆ. ಶ್ರೀ ಶಿವಯೋಗಿ ಶಿವಾಚಾರ್ಯರ ಈ ಶಿಶುವಿನ ಆಟ ಪಾಟ ಕಂದೆಗೆ ಮೆಚ್ಚುಗೆ ಯಾಗಬಲ್ಲುದೆಂದೆ ನೆರೆ ನಂಬುಗೆ! ಅಂತೆಯೇ ಈ ತುಣುಕು–ಮಿಣುಕು ಬರೆವಣಿಗೆಗಳ ಸಾಸದ ಬಗೆ !!



ಓಂ. ಶಂ.

# ಸಿದ್ಧಾಂತ ಚಿಂತನ

## ( ಜೀವನ ತತ್ವಭಾವದಿಂದ )

ತರ್ಕಿಸಿ ಯೋಚಿಸಿ ವಿಚಾರಿಸಿ– ಆಲೋಚಿಸಿ ಚಿಂತನಿಸಿ ಮಾಡಿದ ನಿರ್ಣಯ, ಅಥವಾ ತೀರ್ಮಾನ. ನಿರ್ದುಷ್ಟವಾಗಿ ನಿರ್ದಿಷ್ಟಗೊಳಿಸುವಿಕೆ, ನಿರ್ಧಾರ ಮಾಡುವಿಕೆ. ಈ ಎಲ್ಲ ಲಕ್ಷಣ ಲಕ್ಷಿತವಾದುದೆ ಸಿಧ್ಧಾಂತ.

ಜೀವನದಲ್ಲಿ ಯಾವ ಒಂದು ಸಿದ್ಧಾಂತವಿಲ್ಲದೆ ನಿಶ್ಚಿತವಿಲ್ಲದೆ ಮುನ್ನಡೆಯುವಂತಿಲ್ಲ. ಮುನ್ನಡೆಯಲು ಮೂಲ ಸಿದ್ಧಾಂತ. ಸಿದ್ಧಾಂತವಿಲ್ಲದೆ ಸ್ವಾನುಭೂತಿ ಸಮನಿಸದು. ಸಿದ್ಧಾಂತ ಮಾನವನಿಗಿತ್ತ ಪ್ರಾಕೃತಿಕ ಪ್ರಸಾದ. ಸಿದ್ಧಾಂತವಾದ ಬಳಿಕ ಮಾನವನಿಗೆ ನಿಶ್ಚಲತೆ–ನಿರ್ಮಲತೆಗಳು ನೆರೆದು ಬರುತ್ತವೆ. ಧ್ಯೇಯ ನಿಶ್ಚಿತಗೊಳ್ಳುತ್ತದೆ. ಸಿದ್ಧಾಂತದಿಂದ; ಮತ್ತು ಸತ್ಯಸ್ಥಿತಿ ಸಮನಿಸುತ್ತದೆ.

ತತ್ವ ಸಿಧ್ಧಾಂತ, ಧರ್ಮಸಿಧ್ಧಾಂತ, ದರ್ಶನ ಸಿದ್ಧಾಂತ ಎಂದು ಮುಂತಾಗಿ ಹೇಳಲಾಗುತ್ತಿದೆ. ಸೃಷ್ಟಿಯ–ಸೃಷ್ಟೀಶನ ಮತ್ತು ಪಿಂಡಾಂಡದ ರಹಸ್ಯಗಳನ್ನೆಲ್ಲ ಚಿಂತನ ಮಾಡಿ ವಿಚಾರ ಮಾಡಿ ನಿಜಸ್ಥಿತಿಯನ್ನು ನಿರ್ದಿಷ್ಟವಾಗಿ ಕಂಡು ಕೊಳ್ಳುವಿಕೆಯೆ ಸಿದ್ಧಾಂತ! ತತ್ವಗಳ ಧರ್ಮಗಳ ಬಗೆಗೂ ಅಷ್ಟೆ! ಆಳವಾಗಿ ಆಲೋಚಿಸಿ ಒಂದು ನಿರ್ಣಯಕ್ಕೆ ನಿಲುಕುವಿಕೆಯೋ ಸಿದ್ಧಾಂತ! ಸಿದ್ಧಾಂತೀಕರಿಸದ ತತ್ವ ತತ್ವವೇ ಅಲ್ಲ. ಧರ್ಮ ಧರ್ಮವೇ ಅಲ್ಲ. ಸಾಲದ್ದಕ್ಕೆ ಮಾನವೀಯ ಜೀವನವೇ ಅಲ್ಲ. ಜೀವನವನ್ನು ನೈಜವಾದಿ ರೂಪಿಸಿಕೊಳ್ಳಬೇಕಾದರೆ (ರೂಪಿಸಿಕೊಳ್ಳಬೇಕು) ಸಿದ್ಧಾಂತೀಕರಿಸಿಕೊಳ್ಳುವಿಕೆ ಅನಿವಾರ್ಯ. ಜೀವನದ ಎಲ್ಲ ಕ್ಷೇತ್ರಗಳಲ್ಲಿ ಎಲ್ಲ ವ್ಯವಹಾರಗಳಲ್ಲಿ ಇದು ಬೇಕೇಬೇಕು. ಇಲ್ಲ

ವಾದಲ್ಲಿ ಜೀವನಕ್ಕೆ ಅರ್ಥವೇ ಇಲ್ಲ, ಇರುವುದಿಲ್ಲ; ಜೀವನ ಪ್ರಗತಿಗೆ ಪ್ರಬುದ್ಧ ತೆಗೆ ಪ್ರತಿಬಂಧ; ಪ್ರಭರ್ಂಗ,ಸಿದ್ಧಾಂತವು ಜೀವನ ಪ್ರವರ್ತನೆಗೆ ಮಾರ್ಗದರ್ಶಕ; ಮುಖ್ಯ ಆಧಾರ.

ಅಜ್ಞಾನ ಅನುಮಾನ ಅಂದರೆ ಸಂಶಯ ಇವು ನಿಜ ಜೀವನದ ಅಂಧ ಕಾರಗಳು. ಆವರಣಗಳು, ಅಪಕರ್ಷಗಳು, ಆಪಘಾತಗಳು, ಅಂದರೆ ಮಾನ ವೀಯತೆಯ ಮಾರಕಗಳು, ಇವಿರುವಲ್ಲಿ ನಿರ್ದಿಷ್ಟವೂ ನಿರ್ದುಷ್ಟವೂ ಆದ ಗುರಿ ಇರುವುದಿಲ್ಲ; ನಿರ್ಮಲವೂ ನಿಶ್ಚಿತವೂ ಆದ ವಿಚಾರಾಚಾರಗಳಿರುವುದಿಲ್ಲ. ತಾತ್ತ್ವಿಕವಾಗಿ ಚಿಂತನಗೈಯುವ ಪ್ರಜ್ಞಾಶಕ್ತಿಯಿರುವುದಿಲ್ಲ. ಸತ್ಯಾನ್ವೇಷ ಣೆಯ ಸಾಮರ್ಥ್ಯ ಮುನ್ನವೇ ಇರುವುದಿಲ್ಲ. ಅಮೂಲ್ಯವಾದ ಈ ಮಾನವ ಜೀವನವನ್ನ ಅನ್ಯಾಯ ಅನೀತಿಗಳಿಗೆಳಸುತ್ತವೆ. ನಷ್ಟ, ಕಷ್ಟಗಳಿಗೀಡೆಯಾಗಿ ಸುತ್ತವೆ. ಮಾಡಬಾರದ್ದನ್ನೆಲ್ಲ ಮಾಡಹಚ್ಚುತ್ತವೆ. ಆಡಬಾರದ್ದನ್ನೆಲ್ಲ ಆಡಹಚ್ಚುತ್ತವೆ. ನೋಡಬಾರದ್ದನ್ನೆಲ್ಲ ನೋಡ ಹಚ್ಚುತ್ತದೆ ಕೇಳಬಾರದ್ದ ನ್ನೆಲ್ಲ ಕೇಳ ಹಚ್ಚುತ್ತವೆ. ಹೋಗಬಾರದಲ್ಲಿಗೆ ಹೋಗ ಹಚ್ಚುತ್ತವೆ. ಹೀನ ವಿಷಯುಗಳಿಗಾಗಿ ಮನವನ್ನು ಸೆಳೆಯುತ್ತವೆ. ಮಮಕಾರ ಅಹಂಕಾರಗಳಿಗೆ ಮಿತಿಯಿರುವುದಿಲ್ಲ, ಹಿರೆಯರೆಂಬ ಭಾವವಿರುವುದಿಲ್ಲ ಹಿರಿತನದ ಮಾತನ್ನೆಲ್ಲಿ? ಹುಲುಬಾಳೇ ಬಾಳಾಗಿರುತ್ತದೆ. ಆತ್ಮ ಚಿಂತನೆಗೆ ಅವಕಾಶವಿರುವುದಿಲ್ಲ. ಉದುರು ಭರಣದಲ್ಲಿಯೇ ಬೆಲೆ ಬಾಳುವ ಬಾಳು ಹಾಳಾಗುತ್ತದೆ. ಬಾಳು ಹಾಳಾಗುತ್ತದೆ, ಎಂಬ ಅರಿವೇ ಇರದು. ಇರುವುದಿಲ್ಲ. ಅಹಿತಚಿಂತನ, ಅನು ಚಿತಾಚರಣೆ,ವೃಥಾ ಕಾಲಯಾಪನೆ ಇವೆ ಬಾಳು ಬದುಕಿನ ಗುರಿಯಾಗಿರು ತ್ತವೆ. ಪುಣ್ಯ ಪಥಕ್ಕೆಂಬಿರದು. ಮಾಡಬೇಕಾದುದೇನೆಂಬುದನ್ನು ಚನ್ನಾಗಿ ಚಿತ್ತದಲ್ಲಿ ಚಿಂತನ (ಆಲೋಚನ) ಮಾಡಿ. ಒಂದು ನೈಜ ನಿಶ್ಚಯಕ್ಕೆ ಬಂದು ಮುಂದುವರಿವ ಜಾಯಮಾನವೇ ಇರದು.

ಸಿದ್ಧಾಂತ ಚಿಂತನ ಪರಿಶುದ್ಧಪಥದಲ್ಲಿ ಮುಂದುವರಿಯುವಂತೆ ಕುತೂ ಹಲವನ್ನು ಕೆರಳಿಸುತ್ತದೆ ಒಳ್ಳುರಿಗೆ ಒಗ್ಗುವಂತೆ ಮಾಡುತ್ತದೆ. ಮಾನವೀ

ಯೆತೆಯನ್ನು ಉಳಿಸಿಕೊಳ್ಳಲು ಮನಸ್ಸನ್ನು ಮಾಡಿಸುತ್ತದೆ.ವಿಶುದ್ಧ ವಿಚಾರ ವಿಲ್ಲದೆ ಆಚಾರವಿಲ್ಲದೆ ಸಿದ್ಧಾಂತ ಮಾಡಲು ಸಾಧ್ಯವಿಲ್ಲ. ಸಿದ್ಧಾಂತದಲ್ಲಿ ತಲ ಸ್ಪರ್ಶಿಯಾದ ಮೀಮಾಂಸೆ, ತಾತ್ವಿಕ ಪರಾಮರ್ಶೆ, ಭೌತ ವಿಮರ್ಶೆ ಇದ್ದೇ ಇರುತ್ತವೆ,

ಕೈಕೊಂಡ ಕಾರ್ಯ ಕೈಕೊಂಬುವ ಕಾರ್ಯ, ಸಂದಣಿಸುವ ಸಂಶಯ, ಸಂಭ ವಿಸುವ ಸಮಸ್ಯೆ. ಬೆಂಬತ್ತುವ ಭ್ರಾಂತಿ ಇವುಗಳ ತೀರ್ಮಾನ ಮಾನವ ಜೀವ ನದ ಮುಖ್ಯಾಂಗ. ಇಲ್ಲಿ ತೀರ್ಮಾನವೆಂದರೆ ಸಿದ್ಧಾಂತವೆಂದೇ ಅರ್ಥ ! ಸಿದ್ಧಾಂತ ಜೀವನದ ಉಸಿರು; ಬೆನ್ನಾಸರ. ಸಿದ್ಧಾಂತ (ನಿರ್ಣಯ) ಸಾಮರ್ಥ್ಯ ಜೀವನ ವನ್ನು ಎತ್ತಿಹಿಡಿದು ಭವಿಷ್ಯವನ್ನು ರೂಪಿಸಿಕೊಳ್ಳುವ ಸತ್ಕಲೆ ! ಒಂದು ಒಳ್ಳೆಯ ನಿರ್ಣಯಕ್ಕೆ ಬಂದು ವ್ಯವಹರಿಸುವಿಕೆಯಲ್ಲಿ ಜಾಗ್ರತೆಯಿದೆ,`ಜಾಣ ತನವಿದೆ. ಪ್ರತಿಭೆಯನ್ನು ಸಂಪಾದಿಸಲು ಸತ್ವಶೀಲ ಸಾಧನವೂ ಆಗಿದೆ.ಯಾವು ದನ್ನೇ ಆಗಲಿ ಸಿದ್ಧಾಂತಿಸಿ ಅಂದರೆ ಆಗು ಹೋಗುಗಳನ್ನು ನಿರ್ಣಯಿಸಿ ನಡೆ ಯುವುದೇ ನೈಜ ಮಾನವ ಜೀವನ. ತಾನು ಈ ಕಿರೆಗೆ ಹುಟ್ಟಿಬಂದುದೇಕೇ ಏನು ಮಾಡಿದರೆ ಒಳಿತು; ಹೇಗೆ ಮಾಡಬೇಕು ? ಎಂಬುದನ್ನು ಮುಂದಾಗಿ ನಿರ್ಣಯಿಸಿಕೊಂಡು, ಅದರಂತೆ ಮುಂದೆ ನಡೆದುಕೊಳ್ಳುವುದೇ ವಿಹಿತ; ಮಾನವ ಸ್ವಭಾವ ! ಮತ್ತು ಮಾನಸಿಕ ಸಹಜಕ್ರಿಯೆ; ವೈಚಾರಿಕ ಪ್ರಕ್ರಿಯೆ ಪ್ರತಿಯೊಂದಕ್ಕೂ ನಿರ್ಣಯದ ನಿಲವಿಗೆ ಬಂದಾಗಬೇಕು. ಬಂದರೇನೆ ಶಾಂತಿ ಸಮಾಧಾನ ಕಾರಣ, ಈ ರೀತಿ ಇಂದು ಮಾತ್ರವಲ್ಲ ಹಿಂದಿನಿಂದಲೂ ಜಗತ್ತಿನ ಜನತೆಯಲ್ಲಿ ನಡೆದುಬಂದ ಬರುತ್ತಿರುವ ಕರ್ತವ್ಯವಾಗಿದೆ. ನ್ಯಾಯಾಲಯ ಗಳು ಮಾಡುತ್ತಿರುವುದು.ಇದೇ ಕರ್ತವ್ಯವಾಗಿದೆ.ಅವರವರಕಾರ್ಯಗಳಿಗನುಗುಣ ವಾದ ನಿರ್ಣಯ ಅಂದರೆ ಸಿದ್ಧಾಂತಗಳು ಸಾಗುತ್ತಿರುತ್ತವೆ. ವ್ಯಾಪಾರ ವಾಣಿಜ್ಯ ಉದ್ಯಮ. ರಾಜಕೀಯ ಧಾರ್ಮಿಕ, ಶೈಕ್ಷಣಿಕ, ವ್ಯವಸಾಯ ಮೊದಲಾದ ವ್ಯವಹಾರಗಳಿಲ್ಲದ ಜೀವನವಿಲ್ಲ ಪ್ರತಿಯೊಂದಕ್ಕೂ ನಿರ್ಣಯಾತ್ಮಕ ಸಿದ್ಧಾಂತ ವಿದ್ದೇ ಇರುತ್ತದೆ.

'' ಅಗಸ್ತ್ಯ ಬಹುದಾಖ್ಯಾತಾ: ಸಿದ್ಧಾಂತಾ ರುಚಿಭೇದತಃ

ಭಿನ್ನಾಚಾರಸಮಾಯುಂಕ್ತಾ ಭಿನ್ನಾರ್ಥಪ್ರತಿಪಾದಕಾ: ।
ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾ: ಪಾಶುಪತಂತಥಾ
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥

ಆದ್ಯ ರೇಣುಕ ಭಗವತ್ಪಾದಕರು ತಮ್ಮ ಶಿಷ್ಯನಾದ ಅಗಸ್ತ್ಯ ಮಹಾ ಮುನಿಗೆ ಓ ಮುನಿಯೆ, ಅವರವರ ರುಚಿಗೆ ತಕ್ಕಂತೆ ಸಿದ್ಧಾಂತಗಳು ಬಹು ಪ್ರಕಾರವಾಗಿ ಖ್ಯಾತವಾಗಿವೆ. ಭಿನ್ನ ಭಿನ್ನ ಆಚಾರಗಳಿಂದ ಕೂಡಿಕೊಂಡು ಭಿನ್ನ ಭಿನ್ನ ಅರ್ಥಗಳನ್ನು ಪ್ರತಿಪಾದಿಸಿ ನಿರ್ಣಯಿಸುವವುಗಳಾಗಿವೆ. ದಾರ್ಶನಿಕ ವಾಗಿಯೂ ಸಾಂಖ್ಯ, ಯೋಗ. ಪಾಂಚರಾತ್ರ. ವೇದ, ಪಾಶುಪತವೆಂಬುದಾಗಿ ಷಟ್‌ಸಿದ್ಧಾಂತಗಳೂ ಇವೆ. ಇವು ಪ್ರಾಮಾಣಿಕವಾಗಿದ್ದು ತೆಗೆದು ಹಾಕತಕ್ಕಂತ ವುಗಳಲ್ಲ, ಇವುಗಳಲ್ಲಿ ಶಿರೋರತ್ನವಾಗಿ ಶಿವಾದ್ವೈತ ಸಿದ್ಧಾಂತವಿದೆ.

ಪಿಂಡಾಂಡ-ಬ್ರಹ್ಮಾಂಡ-ಪರಶಿವಬ್ರಹ್ಮ ಇವುಗಳ ಮೂಲ ಸ್ವರೂಪ ಗಳನ್ನು ಅರಿತುಕೊಳ್ಳುವ ಆಸಕ್ತಿ ಆಸ್ತಿಕರಿಗೆ ಇದ್ದೇ ಇರುತ್ತದೆ. ಇವುಗಳ ವ್ಯಾಪಾರಗಳನ್ನು ಕುರಿತು ಆಲೋಚನೆಯ:ನೆಸಗಿ ವ್ಯಾಪಾರ ಕಾರಣಗಳಾದ ತತ್ತ್ವಗಳ ಚಿಂತನ ಶೋಧನ ಆಗಬೇಕು. ಇಂತಾದರೆ ಶುದ್ಧಿ ಸಿದ್ಧಿಗಳುಂಟಾ ಗುವವೆಂಬ ಸಿದ್ಧಾಂತವನ್ನುಂಟು ಮಾಡಿಕೊಳ್ಳಬೇಕು. ಆ ಆ ತತ್ತ್ವಧರ್ಮ ಗಳನ್ನರಿತು ಆಚರಿಸಬೇಕು. ಮೊದಲು ವ್ಯಷ್ಟಿ-ಸಮಷ್ಟಿ ಪರಮಮೇಷ್ಠಿಗಳ ಅಥವಾ ಭೋಕ್ತೃ, ಭೋಜ್ಯ-ಪ್ರೇರಕ ವಸ್ತುತ್ರಯದ ವ್ಯಾಪಾರ ನಿರ್ಣಯ ವಾಗಬೇಕು. ಪ್ರೇರಕ ಮಹಾಚೈತನ್ಯ ನಿಷ್ಕಶಕ್ತಿತ್ರಿಗುಣಾತ್ಮಕವಾಗಿ ಭೋಕ್ತೃ ಗಳಾದ ಜೀವಾತ್ಮಕ ಮೇಲೆ, ಭೋಜ್ಯವಾದ ಜಗದ್ವಿಷಯಗಳ ಮೇಲೆ ಪ್ರಯೋಗಿಸುತ್ತಾಳೆ. ಸತ್ವರಜತಮಗಳಿಂದ ಕೂಡಿ ಪ್ರಕೃತಿ–ವಿಕೃತಿಗಳಿಗೆ ಕಾರಣಳಾಗಿದ್ದಾಳೆ. ದೇವ–ಮಾನವ–ದಾನವ ಪಶು ಪ್ರಾಣಿ ಮುಂತಾದ ಜಾತಿ ಭೇದಗಳಿಗೆ ಕಾರಣಕರ್ತೃಳಾಗಿದ್ದಾಳೆ. ಈ ಜಗತ್ತು ಶಿವಶಕ್ತಿ ಸಮುತ್ಪ ನ್ನವಾಗಿದ್ದರೂ ಉಪಾಧಿ ಭೇದದಿಂದ ಬಹುವಿಧವಾಗಿ ಪರಿಣಮಿಸಿದೆ; ಅವಿದ್ಯಾಸಂಬಂಧದಿಂದ ಜನಿಸಿದ ಜೀವಾತ್ಮರಿಗೆ ಭೋಜ್ಯವಾಗಿದೆ. ಮಾನವರು

ಅಲ್ಪಜ್ಞರು ಅಲ್ಪಕರ್ತೃಗಳು ಆಗಿದ್ದಾರೆ ಜನ್ಮಭಾವದಿಂದಾಗಿ! ಶಿಕ್ಷಣ ಸುಸಂಸ್ಕಾರಗಳಿಂದ ಶುದ್ಧಿ ವೃದ್ಧಿಗಳನ್ನು ಸಿದ್ಧಿಸಿಕೊಳ್ಳಬೇಕಾಗಿದೆ. ಸಿದ್ಧಿಸಿಕೊಂಡರೆ ಮಾನವರು ಮಹಾನುಭಾವರಾಗುತ್ತಾರೆ; ವಿಶ್ವವಿಭೂತಿ ಪುರುಷರಾಗುತ್ತಾರೆ. ಅಸೀಮಿತ ಪ್ರಭಾವವುಳ್ಳವರಾಗುತ್ತಾರೆ. ವಿಕಲ್ಪಗಳಿಗೆ ವಿಕಾರಗಳಿಗೆ ಒಳಗಾಗದಿರುತ್ತಾರೆ. ಶುದ್ಧಾಂತಃಕರಣವಾಗಿ ಸಮದರ್ಶಿಗಳೂ ಸಮವರ್ತಿಗಳೂ ಆಗಿ ಪ್ರಕಾಶಮಾನರಾಗುತ್ತಾರೆ ಸ್ವಾರ್ಥ ಸಂಕುಚಿತ ಕೂಪದಿಂದ ಮೇಲಕ್ಕೆದ್ದು ವಿಶಾಲಮನೋಭಾವವುಳ್ಳವರಾಗುತ್ತಾರೆ,ಪ್ರಸಾದ ಭಾವವುಳ್ಳವರಾಗುತ್ತಾರೆ;ಎಂಬೀ ಮೊದಲಾದ ಜೀವನ ಮಾರ್ಗದರ್ಶನವನ್ನು ನಿರ್ಣಯಿಸಿ ನಿರೂಪಿಸುವುದೇ ಸಿದ್ಧಾಂತ; ಶಿವಸಿದ್ಧಾಂತ. ಸತ್ಯ, ಸೌಂದರ್ಯ, ಧರ್ಮ, ದರ್ಶನ, ಕ್ರಿಯೆ, ಜ್ಞಾನ, ಭಾವ, ಅನುಭಾವ, ಶೀಲ, ದೇಹ, ಆತ್ಮ, ಅಂತರಾತ್ಮ, ಪರಮಾತ್ಮ ಮೊದಲಾದವುಗಳ ಚಿಂತನ–ವಿಶ್ಲೇಷಣ–ಸಂಶ್ಲೇಷಣಗಳನ್ನು ನೆರವೇರಿಸಿ, ಇವುಗಳ ನೈಜವಾದ ಅರ್ಥಗಳನ್ನು ತತ್ತ್ವಗಳನ್ನು ನಿರ್ಧರಿಸುವುದೆ ಸರ್ವಸಮನ್ವಯ ಸಿದ್ಧಾಂತ! ಇದನ್ನು ವಿಶ್ವದಲ್ಲಿ ಅನೇಕ ತತ್ತ್ವಜ್ಞಾನಿಗಳು ಮಾಡುತ್ತ ಬಂದಿದ್ದಾರೆ; ಮಾಡುತ್ತಿದ್ದಾರೆ. ಇಂತವರಲ್ಲಿ 'ಚಿದಾನಂದ ಪರಾಕಾಶ ಶಿವಾನುಭವಯೋಗವುಳ್ಳ ಕ್ರಾಂತದರ್ಶಿ ಶ್ರೀ ಶಿವಯೋಗಿ ಶಿವಾಚಾರ್ಯರು ಒಬ್ಬರು; ಒಬ್ಬರು ಮಾತ್ರವಲ್ಲ ಅಗ್ರಗಣ್ಯರು. ಶಿವಾದ್ವೈತ ಸಿದ್ಧಾಂತ ಪ್ರತಿಪಾದಕರು. "ಸಿದ್ಧಾಂತ ಶಿಖಾಮಣಿ" ಇವರ ಸರ್ವ ಶ್ರೇಷ್ಠ ಸಿದ್ಧಾಂತಗ್ರಂಥ ! ಇದರಲ್ಲಿ ಜೀವ ಜಗತ್ತು ಜಗದೀಶ್ವರ ಎಂದೀ ತತ್ತ್ವತ್ರಯ ಸಮಗ್ರ ನಿರೂಪಣೆಯಿದೆ. ಈ ತತ್ತ್ವತ್ರಯದಲ್ಲಿ ಮೂವತ್ತಾರು ತತ್ತ್ವಗಳು ಸೂಕ್ಷ್ಮವಾಗಿ ನಿರೂಪಿತವಾಗಿವೆ."ಅನುಗ್ರಹಾಯಲೋಕನಾಮಭ್ಯಧಃತ ಸ ಧಿಯಾಂವರ; !" ಎಂಬಂತೆ ಲೋಕಾನುಗ್ರಹಕ್ಕಾಗಿ ನಿರೂಪಿತವಾಗಿವೆ, ನಿರ್ಲಿಪ್ತವಾಗಿದೆ ಇದರಲ್ಲಿ ಅವರ ಸ್ವಾರ್ಥವೇನಿಲ್ಲ. ಸಾಧಕರೆಲ್ಲರೂ ಅಪೂರ್ಣತೆಯಿಂದ ಪೂರ್ಣದೆಡೆಗೆ ಸಾಗುವ ಸೋಪಾನಗಳು ಸಿದ್ಧವಾಗಿವೆ. ಸಿದ್ಧಾಂತವಾಗಿವೆ, ಇವುಗಳ ಆಧಾರದ ಮೇರೆಗೆ ಎಂತವರು ಪ್ರಗತಿಯನ್ನು ಪಡೆಯಲು ಸ್ವಸ್ಥಾಸಾಧ್ಯ. ಜೀವನದ ಸರ್ವ ಸಮಸ್ಯೆಗಳು ಪರಿಷ್ಕಾರವಾಗಿ ಸತ್ಯವನ್ನು ಸಾಧಿಸಿ ಮಾನವೀಯತೆಯನ್ನು ಸಾರ್ಥಕ ಪಡಿಸಿಕೊಳ್ಳುವ ದೀಪ್ತ ದೃಷ್ಟಿ; ಸಹಜ ಶಕ್ತಿ

ಸಮನಿಸುತ್ತವೆ. ನೂರೊಂದು ನೆಲೆಗಳೂ ಸಿದ್ಧಾಂತಕೃತ ಹಂತಗಳು. ಯಾವ ಆಯಾಸವಿಲ್ಲದೆ ಹತ್ತಬಹುದು, ಸಂಶಯಕ್ಕಾಸ್ಪದವಿಲ್ಲದೆ ನಿರ್ಣಯಗಳು ವಿಶಿಷ್ಟ ರೀತಿಯ ಚಿಂತನಗಳು; ಪರಿಪಕ್ವ ಪರಾಮರ್ಶೆಗಳು ಪರಿಣಾಮಕಾರಿ ಪ್ರತಿಪಾದನೆಗಳು, ಪರಿಸ್ಫೂರ್ತಿಪ್ರದಾಯಕಗಳು. ಸಂವಿದುಲ್ಲಾಸೋದ್ದೀಪನಗಳು ಆತ್ಮ ಸ್ವರೂಪ ವಿಜ್ಞಾನ ವಿಧಾಯಕಗಳು. ಚಿಚ್ಚೈತನ್ಯ ಲಾವಣ್ಯ ಪ್ರದರ್ಶಕ ಗಳು. ವಿವೇಚಿತ ವಿಶ್ವವಿಭವಗಳು, ಶಿವಾದ್ವೈತ ಪರಮಾನಂದ ಪ್ರಬೋಧಕ ಪ್ರಕಾಶಗಳು. ಚಿದ್ವಿಲಾಸ ಪರಿಸ್ಫೂರ್ತಿ ಪರಿಪೂರ್ಣ ಸುಖ ಸ್ವರೂಪಗಳು, ಚಿದ್ವಿ ಭೂತಿಯೋಗಯುಕ್ತಗಳು, ಸಿದ್ಧಾಂತ ಶಿಖಾಮಣಿಯ ಏಕೋತ್ತರ ಶತಸ್ಥಲ ಗಳು.

ನಿರ್ದಿಷ್ಟ ನಿರ್ಣಯವಿಲ್ಲ, ಜೀವನದಲ್ಲಿ ಸಮಸ್ಯೆಗಳು ಸಾವಿರಾರು. ಎಲ್ಲಿಂದ ಬಂದೆ? ಏತಕ್ಕೆ ಬಂದೆ: ಇಲ್ಲಿರುವುದು ಏತಕ್ಕೆ ? ಧ್ಯೇಯಧೋರಣಗಳೇನು ? ಅರ್ಥ ಪರಿಪೂರ್ಣಗಳೇನು ? ಈ ಸಂಸಾರ ಈ ದುಃಖ ಸಾಗರ ನನಗೇಕೆ ಗಂಟು ಬಿದ್ದಿದೆ? ಇದೆಲ್ಲ ಈ ದೇಹಕ್ಕೊ ? ಈ ಆತ್ಮಕ್ಕೊ ? ಆತ್ಮವೆಂದರೇನು ? ಈ ಈ ಮೈ ಮನೆಗೆ ಏಕೆ ಬಂದಿದೆ ? ಬೇನೆ ಬೇಸರಿಕೆಗಳೇಕೆ ? ಈ ಪಂಚಕ್ಲೇಶ ಗಳೇಕೆ? ಈ ಅರಿಷಡ್ವರ್ಗದ ಉಬ್ಬರವೇನು? ಈ ಮದ ಮತ್ಸರಗಳ ಕಿತ್ತಾಟ ವೇನು ? ಇವುಗಳೇಕೆ ವೈರಿಗಳಾಗಿರುವವು ? ತಾಪತ್ರಯದರ ತೊತ್ತಳಿತ ವೇನು. ಈ ಜೀವನದಲ್ಲಿ ಆತ್ಮನಿಗಿರುವ ಸ್ಥಾನವೇನು ? ಈ ಉಸಿರೇಕೆ ಹಾ ದಾಡುತಿದೆ ? ಈ ಚಿತ್ತವೇಕೆ ಚಲಿಸುತ್ತಿದೆ, ? ಈ ಹಮ್ಮು ಬಿಮ್ಮುಗಳೇಕೆ ? ಈ ಅಜ್ಞಾನಾಂಧಕಾರವೇಕೆ ಕವಿದಿದೆ? ಇದನ್ನು ಕಳೆವ ರವಿಯಾರು ? ಈ ಈ ಕರ್ಮಜಾಲದಲ್ಲಿ ಬಿದ್ದುದೇಕೆ? ಈ ಭಾವ ಈ ಭ್ರಾಂತಿಗಳಿಗೀಡಾದುದೇಕೆ? ಈ ವಿರಸ ಸರಸಗಳ ಚೆಲ್ಲಾಟವೇನು ? ಈ ದಾಹ ಮೋಹಗಳು ಬೆಂಬಳಿವಿಡಿ ದಿರುವುದೇಕೆ ? ಈ ರಜೋಗುಣ ಈ ತಮೋಗುಣಗಳ ಎಣಿಕೆಯೇನು ? ಮಾಯೆಯ ಮೋಡಿಯಾಟವೇನು ? ಈ ವಿಷಯಗಳ ಎಳೆತ ಸೆಳೆತಗಳೇಕೆ? ಕರಣೇಂದ್ರಿಯಗಳ ಕಚ್ಚಾಟವೇಕೆ ? ಇತ್ಯಾದಿ ಈ ಎಲ್ಲ ಜಟಿಲ ಜಾಲಗ ಳಿಂದ ಬಿಡುಗಡೆ ಎಂದಿಗೆ ? ಯಾರಿಂದ ? ಇವುಗಳಿಗೆಲ್ಲ ಸೈದ್ಧಾಂತಿಕವಾಗಿ ಉತ್ತರ ಹೇಳುವವರಾರು? ಸೈದ್ಧಾಂತಿಕ ಸಮ್ಯಕ್ ಸಂವಿತ್ಪ್ರಕಾಶದಲ್ಲಿ ಕಣ್ಣು

ಬಿಡುವುದೆಂದಿಗೆ ? ಕಣ್ತೆರೆದು ಹೊಲಬಿನಲ್ಲಿ ಹೋಗುವುದೆಂದಿಗೆ ? ಗಮ್ಯ ಗುರಿ ಸೇರುವುದೆಂದಿಗೆ ?

ಸಿದ್ಧಾಂತ ಸ್ರಷ್ಟಾರರಾದ ಸಂವಿಲ್ಲಿಂಗ ದ್ರಷ್ಟಾರರಾದ ಶಿವಾಚಾರ್ಯರು ಮಾರ್ಗದರ್ಶನ ಮಾಡಿಸಬಲ್ಲರಲ್ಲದೆ ಬೇರೆ ಬಟ್ಟೆಯಿಲ್ಲ; ಬೇರೆ ಚೈತನ್ಯ ಶಾಲಿಗಳಿಲ್ಲ.

"ಶಿಷ್ಯಾಣಾಂ ಹೃದಯಾಲೇಖ್ಯಂ ಪ್ರದ್ಯೋತಯತಿ ಯಃ ಸ್ವಯಂ।
ಜ್ಞಾನದೀಪಿಕಯಾ ತೇನ ಗುರುಣಾ ಕಃ ಸಮೋ ಭವೇತ್ ?॥
ಪರಮಾದ್ವೈತ ವಿಜ್ಞಾನ ಪರಮೌಷಧ ದಾನತಃ।
ಸಂಸಾರ ರೋಗ ನಿರ್ಮಾಥೀ ದೇಶಿಕಃ ಕೇನ ಲಭ್ಯತೇ॥
ಸರ್ವಾರ್ಥಸಾಧಕ ಜ್ಞಾನ ವಿಶೇಷಾದೇಶತತ್ಪರಃ।
ಜ್ಞಾನಾಚಾರ್ಯಃ ಸಮಸ್ತಾನಾಮನುಗ್ರಹಕರಃ ಶಿವಃ।
ಅಖಂಡಂ ಯೇನ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು ।
ಆತ್ಮಯೋಗಪ್ರಭಾವೇನ ಸ ಗುರುರ್ವಿಶ್ವಭಾಸಕಃ॥
ಪೂರ್ವಪಕ್ಷಂ ಸಮಾದಾಯ ಜಗದ್ಭೇದವಿಕಲ್ಪನಂ।
ಅದ್ವೈತಕೃತ ಸಿದ್ಧಾಂತೋ ಗುರುರೇಷ ಗುಣಾಧಿಕಃ॥"

—ಸಿದ್ಧಾಂತ ಶಿಖಾಮಣಿ

ಮೇಲಿನ ಕೇಳಿಕೆಗಳಿಗೆಲ್ಲ ಸೂತ್ರಪ್ರಾಯವಾದ ಉತ್ತರ ಈ ಪಂಚ ಶ್ಲೋಕಗಳಲ್ಲಿದೆ. ಈ ಪಂಚಶ್ಲೋಕಗಳು ಪಂಚಾಮೃತಗಳು; ಸಿದ್ಧಾಂತೋಕ್ತಿಗಳು. ಸ್ಫೂರ್ತಿ ಸ್ಫುರಣಕಾರಣಗಳು.

ಜೀವನಕ್ಕೊಂದು ನಿಶ್ಚಿತ ಗುರಿ ಇರಬೇಕು. ಆ ಗುರಿ ತೋರುವ ಗುರು ಬೇಕು. ತನ್ನ ಗುರಿ ತನ್ನೊಳಗಿನದಾಗಿರಬೇಕಲ್ಲದೆ ಹೊರಗಿನದಾಗಿರ ಬಾರದು. ತನ್ನ ನಿರ್ಣಯವಾಗುವುದೇ ಮುಖ್ಯ ಗುರಿ, ಇದನ್ನೆ ಸ್ವಯ ಸಿದ್ಧಾಂತವೆಂದು ಶಿವಾಚಾರ್ಯರು ಬೋಧಿಸುತ್ತಾರೆ. ತನ್ನ ಹೃದಯದಲ್ಲಿ

ತಾನಿರುವನು. ಅವನೇ ಅಂತರಾತ್ಮನು. ಅಜ್ಞಾನಾಂಧಾಕಾರದಿಂದ ತನಗೆ ಕಾಣದಂತಿರುವನು. ಜ್ಞಾನದೀಪವನ್ನು ಹಚ್ಚಿದಲ್ಲ ಕಾಣುವನು ಹಚ್ಚುವಾತನು ನಿರುಪಮ ಶ್ರೀಗುರು. ಭವರೋಗ ಬಾಧಿಸುತ್ತಿದೆ. ಇದನ್ನು ಕಳೆವ ವೈದ್ಯ ಶ್ರೀಗುರುವಲ್ಲದೆ ಬೇರೊಬ್ಬರಿಲ್ಲ. ಶ್ರೀ ಗುರುದೇವನಲ್ಲಿರುವ ಪರಮೌಷಧವೆಂದರೆ, ಪರಮ ಶಿವಾದ್ವೈತ ಸಿದ್ಧಾಂತ ವಿಜ್ಞಾನ ಈ ಪರಮೌಷಧಿಯನ್ನು ಶಿಷ್ಯನಿಗೆ ಕರುಣಿಸಿ ಭವರೋಗವನ್ನು ಕಳೆಯುತ್ತಾನೆ. ಕಳೆದ ಬಳಿಕ ಸರ್ವಾರ್ಥ ಸಾಧಕವಾದ ಸಿದ್ಧಾಂತವೆಂಬ ವಿಶೇಷೋಪದೇಶವನ್ನು ಮಾಡಿ ಜ್ಞಾನಾಚಾರ್ಯನೆನಿಸುತ್ತಾನೆ. ಇವರಂತೆ ಸಮಸ್ತರನ್ನು ಅನುಗ್ರಹಿಸುವ ಶಿವಸ್ವರೂಪನಾಗಿರುತ್ತಾನೆ. ತನ್ನ ಆತ್ಮಯೋಗ ಪ್ರಭಾವದಿಂದ ವಿಶ್ವದ ಸರ್ವವಸ್ತುಗಳಲ್ಲಿ ಅಖಂಡ ಚೈತನ್ಯವನ್ನು ಅಭಿವ್ಯಕ್ತಿಗೊಳಿಸಿ ವೆಗ್ಗಳಿಸುತ್ತಾನೆ–ಶಿಷ್ಯನ ಪಿಂಡಾಂಡದಲ್ಲಿ (ಅಂತರಂಗದಲ್ಲಿ) ವೆಗ್ಗಳಿಸುವಂತೆ! ಜಗದ್ಭೇದವನ್ನುಂಟು ಮಾಡುವ ಪೂರ್ವ ಪಕ್ಷವನ್ನು ತೆಗೆದುಕೊಂಡು ಖಂಡಿಸಿ, ತನ್ನ ಶಿವಾದ್ವೈತ ಸಿದ್ಧಾಂತವನ್ನು ಮಂಡಿಸುತ್ತಾನೆ. ಆತನೇ ದಿಟಕ್ಕೂ ಗುಣಾಧಿಕ ಗುರುವೆಂದೆನಿಸುತ್ತಾನೆ. ಹೃದಯದಲ್ಲಿಯೇ ವಿಶ್ವೇಶ್ವರನನ್ನು ತೋರಿಸುವಂತೆ ವಿಶ್ವವನ್ನು ತೋರಿಸಿ ವಿಶ್ವಭಾಸಕನಾಗಿ ವಿಶ್ವಗುರುವೆಂದೆನಿಸುತ್ತಾನೆ, ಪರಶಿವಬ್ರಹ್ಮ, ಬ್ರಹ್ಮಾಂಡಗಳನ್ನು ಪಿಂಡಾಂಡದಲ್ಲಿಯೇ ತೋರಿಸುವಿಕೆಯೆ ಶಿವಾದ್ವೈತಸಿಧ್ಧಾಂತ! ಇಂದಿನ ವಿಶ್ವೈಕ್ಯ ಪಥದಲ್ಲಿ ಶಿವಾದ್ವೈತ ಸಿದ್ಧಾಂತಅರ್ಥಪೂರ್ಣವಾಗಿದೆ. ಏನೆಲ್ಲವನ್ನೊಳಗೊಂಡು! ಅಗ ವ್ಯಷ್ಟಿ-ಸಮಷ್ಟಿ ಪರಮೇಷ್ಠಿ ಎಂಬ ಭೇದಭಾವವಾಗಲಿ, ಭೋಕ್ತೃ-ಭೋಜ್ಯ-ಪ್ರೇರಕ ಎಂಬ ಭೇದಭಾವವಾಗಲಿ ಇರುವುದಿಲ್ಲ; ಇರಬಾರದು. ಒಗ್ಗಟ್ಟಿನ ಬಾಳು ಬದುಕಿಗೆ ಇದೊಂದೇ ಸತ್ಯ ಸಿದ್ಧಾಂತ! ಇದರಲ್ಲಿ ಯಾವ ಮಿಥ್ಯ ತಥ್ಯಗಳ ಮಾತಿಲ್ಲ. ವಿಶ್ವಬಂಧುತ್ವದಲ್ಲಿ ಸಂಕೋಚ ಸ್ವಾರ್ಥಗಳ ಮಾತೆಲ್ಲಿ ? ಸರ್ವರೂ ಒಬ್ಬ ದೇವನ ಮಕ್ಕಳೆಂಬ ಸಿದ್ಧಾಂತದಲ್ಲಿ ಜಾತಿ ವಿಜಾತಿಗಳ ಮೇಲು ಕೀಳುಗಳ ಮಾತೆಲ್ಲಿ ?'ಸರ್ವಂ ಶಿವಮಯಂ ಜಗತ್'! ಎಂದು ಶಿವಾಚಾರ್ಯ ಶಿವಾಗಮ ಸಮನ್ವಯವಾಣಿ ಸರ್ವಶಿವೈಕವಾಣಿ ಸಾರಿದೆ ಶಿವಾದ್ವೈತ ಸಿದ್ಧಾಂತವನ್ನು ! ಇವರಲ್ಲಿ ದಲಿತ ಪತಿತ ಅಸ್ಪೃಶ್ಯತೆಗಳ

ಮಾತಿಗಿಂಬೆಲ್ಲಿ ? ಸರ್ವರೂ ಸರ್ವಶಿವದರ್ಶಿಗಳಾಗಬೇಕೆಂಬುದೇ ಶಿವಾಚಾರ್ಯರ ಶಿವಾಗಮ ಸಿದ್ಧಾಂತ! ಇದಕ್ಕಿಂತ ಬೇರಿಲ್ಲ ಲೋಕಹಿತ! ಲೋಕಸಹಿತವ ನೆಸಗುವುದಕ್ಕಿಂತ ಬೇರೊಂದಿಲ್ಲ ಜೀವನ ಸಾರ್ಥಕ್ಯ; ಬೇರೊಂದಿಲ್ಲ ತಾತ್ತ್ವಿಕತೆ! ಇದನ್ನು ನಿರ್ಧರಿಸಿ ನಡೆವುದೇ ಜೀವನಸಿದ್ಧಾಂತ! ಲೋಕಹಿತ ಕಾರ್ಯಕಲಾಪಗಳನೆಸಗುವುದರಿಂದ ಭಾವ ವಿಕಾಸ ಭಾವೈಕ್ಯತೆಗಳುಂಟಾಗಿ ವ್ಯಕ್ತಿತ್ವ ದೀಪ್ತಿಗೊಂಡು ಸಾರ್ಥಕವಾಗುತ್ತದೆ; ಪ್ರಕಾಶಕವಾಗುತ್ತದೆ.



## ರೇಣುಕ ಗೀತೆಯು

# ವಿಶ್ವ ವಿಶಿಷ್ಟ ವಿಜ್ಞಾನ

ಕಾವ್ಯರ್ಷಿ ಶ್ರೀ ಶಿವಯೋಗಿ ಶಿವಾಚಾರ್ಯರು ವಿಶ್ವಪ್ರೇಮಿಗಳು; ವಿಶ್ವ ವಿಕ್ರಮಿಗಳು. ವಿನೂತನ ವಿಶ್ವವಿಚಾರ ವಾದಿಗಳು: ವಿಕಾಸ ವಾದಿಗಳು. ವಿಶ್ವ ಚಿತ್ರ ವಿಚಕ್ಷಣರು, ಅಂತೆಯೆ "ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭತ್ತಯೇ.... " ಎಂದು ರೇಣುಕ ಗೀತೆಯ ಮೊತ್ತ ಮೊದಲ ಮಂಗಲ ಶ್ಲೋಕದ ಮೊದಲ ಪಂಕ್ತಿಯಲ್ಲಿಯೆ ತ್ರಿಲೋಕ ಸಂಪದದ ಸುಂದರ ಚಿತ್ರ ವನು, ತನ್ನದೇ ಆದ ಶಬ್ದ ಕುಂಚದಿಂದ ಚಿತ್ರಿಸಿದ ಶಿಲ್ಪಿ. ಬ್ರಹ್ಮ ಭಿತ್ತಿಯ ಮೇಲೆ ಚಿತ್ರಿಸಿದ ಬೃಹದ್ಭಾವದ ಸರ್ವಶ್ರೇಷ್ಠ ಶಿಲ್ಪಿ ದಿವ್ಯಕಾವ್ಯಮಯ ಸಮುಲ್ಲೇಖನ ಕಲೆ ಅನ್ಯಾದೃಶವಾದುದು ಬೇರೆ ಯಾವ ಚಿತ್ರಕಲಾಕಾರನಿಗೂ ಶಿವಾಚಾರ್ಯನ ಈ ಶಕ್ತಿ ಇರದು. ವಿಶ್ವದ ಬಗೆಗೆ ಅವರ ಆ ಆದರಾಭಿಮಾನ ಅಂತಹದು; ಅನುಭೂತಿ ಅಂತಹದು. ಅವರ ಆ ಸಿದ್ಧಾಂತಕ್ಕೆ ಒಂದು ಬ್ರಹ್ಮ ಇನ್ನೊಂದು ಬ್ರಹ್ಮಾಂಡ ಇವೆರಡೇ ಪ್ರಧಾನ ವಿಷಯಗಳು. ಅವಿಭಾಜ್ಯ ವಿಷ ಯಗಳು, ಅಂತೆಯೇ ಅವರು ತಾವು ಸೃಜಿಸಿದ ಸೃಜಿಸಿ ಗೀತಿಸಿದ ರೇಣುಕ ಗೀತೆಯಲ್ಲಿ ವಿಶ್ವ ವಿಜ್ಞಾನವನ್ನು ವಿಶಿಷ್ಟ ರೀತಿಯಲ್ಲಿ ವಿನ್ಯಾಸಗೊಳಿಸಿದ್ದಾರೆ. ಗೀತೆಯ ಉದ್ದಕ್ಕೂ! ಈ ದಿಸೆಯಲ್ಲಿ ಅವರು ವಿಶ್ವಕ್ಕೆ ಸಲ್ಲಿಸಿದ ವಿಶ್ವಾಸ ಸರ್ವಾ ದರ್ಶ ! ವಿಶ್ವದ ಬಗೆಗೆ ಇತರ ದಾರ್ಶನಿಕರು ಅನಾದರವನ್ನೇ ತೋರಿಸುತ್ತಿರು ವಲ್ಲಿ ಇವರು ತೋರಿದ ಆದರ ಅಸಾಧಾರಣವಾದದು. ವಿಶ್ವವು ನಶ್ವರವಾದು ದಲ್ಲ ಪರಶಿವಬ್ರಹ್ಮದಷ್ಟೆ ನಿತ್ಯ–ಸತ್ಯ ಎಂದು ಗ್ರಂಥದ ಉದ್ದಕ್ಕೂ ಸಾರಿದ ಕೀರ್ತಿ ಇದರದಾಗಿದೆ. ಈ ತ್ರಿಲೋಕ ಚಿತ್ತ ಬೇರೆ ಯಾವುದಲ್ಲ. ಆ ಪರಶಿವ ಬ್ರಹ್ಮನದೇ ಆಗಿದೆ. ಆತನೆ ಸಾಕಾರ ಸ್ವರೂಪವಾಗಿದೆ. ಶಿವ ಸಂಪತ್ಸ್ಫುರಿತವಾ ಗಿದೆ, ಆಲೇಖ್ಯವಾಗಿದೆ. ಆರಾಧ್ಯವಾಗಿದೆ. ಸಲ್ಲಕ್ಷಣ ಲಕ್ಷಿತವಾಗಿದೆ. ವಿಶ್ವ

ರೂಪದಲ್ಲಿಯೇ ವಿಶ್ವೇಶ್ವರ ಸ್ವರೂಪವನ್ನು ವಿಭಾವಿಸಲು ಸಾಧ್ಯ. ಆತ ಜಗನ್ಮೂಲನಾಗಿದ್ದಾನೆ. ಆತನಿಂದ ವಿಶ್ವ ಬೆಳಗುತ್ತಿದೆ; ಸುಖಿಸುತ್ತಿದೆ. ಆತನ ಮುಖದಿಂದ ಈ ವಿಶ್ವತತ್ತ್ವಗಳ ಉನ್ಮೇಷ: ಅಂದರೆ ಅರಳುವಿಕೆ! ಆತನ ಆ ವಿಮರ್ಶಾಖ್ಯ ಪರಾಶಕ್ತಿ ವಿಶ್ವಭಾವಿನೀ, ವಿಶ್ವೋದ್ಭಾಸನಕಾರಿಣೀ, ವಿಶ್ವ ವೈಚಿತ್ರ್ಯ ಪ್ರಕಾಶಿನಿ ಆಗಿದ್ದಾಳೆ. ವಿಶ್ವ ಪ್ರಕೃತಿಯಾಗಿದ್ದಾಳೆ. ವಿಶ್ವೇಶ್ವರನು ಪುರುಷನಾಗಿದ್ದಾನೆ. ಈ ವಿಶ್ವ ಶಿವಶಕ್ತಿ ಸಮುತ್ಪನ್ನವಾಗಿದೆ.

"ತತ್ರ ಲೀನಮಭೂತ್ ಪೂರ್ವಂ ಚೇತನಾಚೇತನಂ ಜಗತ್।
ಸ್ವಾತ್ಮಲೀನಂ ಜಗತ್ಕಾರ್ಯಂ ಸ್ವಪ್ರಕಾಶ್ಯಂ ತದದ್ಭುತಂ॥
ಶಿವಾಭಿದಂ ಪರಂ ಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ ।
ಸ್ವರೂಪಮಾದಧೇ ಕಿಂಚಿತ್ ಸುಖಸ್ಫೂರ್ತಿ ವಿಜೃಂಭಿತಂ॥
ತದೀಯಾ ಪರಮಾಶಕ್ತಿ: ಸಚ್ಚಿದಾನಂದಲಕ್ಷಣಾ।
ಸಮಸ್ತಲೋಕ ನಿರ್ಮಾಣ ಸಮವಾಯ ಸ್ವರೂಪಿಣೀ ।
ತದಿಚ್ಛಯಾಽಭವತ್ ಸಾಕ್ಷಾತ್ ತತ್ಸ್ವರೂಪಾನುಕಾರಿಣಿ॥"
— ರೇ. ಗೀತೆ ಪ. ೨

ಸನಾತನ ಪರಶಿವಬ್ರಹ್ಮ. ಈ ಚರಾಚರ ಜಗತ್ತು ಪೂರ್ವದಲ್ಲಿ ಅದರಲ್ಲಿ ಲೀನವಾಗಿತ್ತು. ಬ್ರಹ್ಮ ಗರ್ಭಗತವಾದೀ ಜಗತ್ಕಾರ್ಯವು ಸ್ವಯಂಪ್ರಕಾಶ್ಯವು. ಅದುವೇ ಒಂದು ಅದ್ಭುತ. ಅಂದರೆ ಪರಶಿವಬ್ರಹ್ಮವು ಜಗನ್ನಿರ್ಮಾಣ ಮಾಡುವ ಇಚ್ಛೆಯಿಂದ ಕಿಂಚಿತ್ ಸುಖಸ್ಫೂರ್ತಿ ವಿಜೃಂಭಿತ ಸ್ವರೂಪವನ್ನೇ ಜಗದಾಕಾರವಾಗಿಸುವುದು. ಈ ವಿಶ್ವಸೃಷ್ಟಿ ಆ ಪರಬ್ರಹ್ಮದ ಸ್ವಯಂಭುಲೀಲೆ ಮತ್ತು ಅದರ ಅತ್ಯಲ್ಪ ಸುಖಸ್ಫೂರ್ತಿ ವಿಜೃಂಭಿತ. ಅಂದರೆ ವಿಕಾಸವಾಗಿ ಪ್ರಕಟಿತ.

ಆ ಪರಶಿವನ ಪರಾಶಕ್ತಿಯು ಪರಶಿವನಂತೆ ಸತ್ ಚಿತ್ ಆನಂದ ಲಕ್ಷಣವುಳ್ಳದು ನಿತ್ಯ ಪೂರ್ಣವಾದುದು. ಈ ಸಮಸ್ತಲೋಕ ನಿರ್ಮಾಣ ಕಾರ್ಯದಲ್ಲಿ ಸಮವಾಯ ಸ್ವರೂಪಿಣಿಯು. ಆ ಪರಶಿವನ ಸಂಕಲ್ಪದಂತೆ ಸಾಕ್ಷಾ

ತ್ತಾಗಿ ವಿಶ್ವದ ಆ ಆ ಸ್ವರೂಪಾನುಕಾರಿಣಿಯಾಗಿರುವುದು. ಅಂದರೆ ವಿಶ್ವದ ಅಣು ಅಣುವಿನಲ್ಲಿಯೂ ಶಿವಚೈತನ್ಯವಿರುವಂತೆ ಶಕ್ತಿಯೂ ಇದೆ. ಶಿವಶಕ್ತಿಯಿಲ್ಲದ ಅಣುವಿಲ್ಲ. ಶಿವನು ಶಕ್ತಿವಂತನು. ವಿಶ್ವವಿಭುವು. ವಿಶ್ವನಿಯಾಮಕನು ಈ ಜಗಜ್ಜಾಲ ನಿರ್ಮಾಣ ವಿಧಿಕ್ಷಮನು. ವಿಶ್ವಕಾರ್ಯಕ್ಕೆ ಬೇಕಾದ ವಿನೆಲ್ಲ ಉಪಾಯ ಸಂಪತ್ತಿ ಶ್ರೀಮಂತನು. ಸರ್ವಶಕ್ತನು, ಸರ್ವಕರ್ತನು ವಿಶ್ವನಾಯಕನು.

ವಿಶ್ವವು ನಾನಾರೂಪವುಳ್ಳದು. ಅಂತೆಯೆ ವಿಶ್ವೇಶ್ವರನು ನಾನಾ ರೂಪವಂತನು. "ರೂಪಂ ರೂಪಂ ಪ್ರತಿರೂಪಂ ಬಭೂವ" ಎಂದಿದೆ ಶ್ರುತಿ. ಜಗತ್ತಿಗೆ ಪ್ರಥಮ ಕಾರಣನಾದ ಶಿವನು ಸ್ವೇಚ್ಛಾನುಗ್ರಹ ವಿರಾಜಿತನು. ಸರ್ವಕಾರಣಗಳಿಗೆ ಕಾರಣನು. ತಾನು ಮೊಮ್ಮೊದಲು ಅಪ್ರಾಕೃತ ಸೃಷ್ಟಿಯನ್ನೆಸಗಿ, ಬಳಿಕ ಪ್ರಾಕೃತ ಸೃಷ್ಟಿರಚನೆಗೆ ಚತುರ್ಮುಖ ಬ್ರಹ್ಮನಿಗೆ ಶಕ್ತಿಯನ್ನು ದಯಪಾಲಿಸುವನು. ಶಿವನ ಶಕ್ತಿಲತೆಯ ಮೊಗ್ಗು ಹೂವುಗಳು ಈ ಮೂರು ಲೋಕಗಳು. 'ಬ್ರಹ್ಮಾಂಡ ಕುಂಡಿಕಾಷಂಡಪಿಂಡೀಕರಣ ಪಂಡಿತ'ನಾದ ಶಿವನ ಶಕ್ತಿಯು ಇಚ್ಛಾಜ್ಞಾನ ಕ್ರಿಯಾರೂಪದಲ್ಲಿ ಅನೇಕ ಶಕ್ತಿ ವಿಲಾಸಿನಿಯಾಗಿ, ವಿದ್ಯಾತತ್ತ್ವ ಪ್ರಕಾಶಿನಿಯಾಗಿ ಇರುವಳಾದರೂ ಆ ಪರಶಿವನಲ್ಲಿ ಅವಿನಾಭಾವದಿಂದಿರುವಳು. ಇಂತಿರುವಾಗ ಶಕ್ತಿರೂಪರಾದ ಸ್ತ್ರೀವರ್ಗವೇ ಸಂಸಾರವೆಂದು ಆರೋಪವಮಾಡುವ ಏಕಪಕ್ಷೀಯ ಪುರುಷವಾದ ಅದೆಷ್ಟು ಸರಿಯಲ್ಲವೆಂಬ ರೇಣುಕಗೀತೆಯ ಆದರ್ಶಕ್ರಾಂತಿವಾದವನ್ನು ಗಮನಿಸಬೇಕು.

"ಸಂಸಾರ ವಿಷಕಾಂತಾರ ದಾಹದಾವಾಗ್ನಿಲೇಖಯಾ ।" ಸಂಸಾರವೆಂಬುದೊಂದು ವಿಷಕಾಂತಾರ. ಅದನ್ನು ದಹಿಸುವ ದಾವಾಗ್ನಿಲೇಖೆ ಶಕ್ತಿ; ಮತ್ತು ವಿದ್ಯಾತತ್ತ್ವ ಪ್ರಕಾಶಿಕೆ,-ಜ್ಞಾನಶಕ್ತಿ ಎಂದು ಮಹಂತಾಗಿ ನಿಜಾನುಭಾವದಿಂದ ನಿರೂಪಿಸಿ ಶಿ. ಶಿವಾಚಾರ್ಯನು, ಪುರುಷವರ್ಗವು ಮೂಢಸಾಂಪ್ರದಾಯಿಕವಾಗಿ ಸಂಸಾರಕಾರಣಳು ಸ್ತ್ರೀಯು ಎಂಬೀ ಹೇಳಿಕೆಯನ್ನು

ಮೊದಲು ಹೊಡೆದು ಹಾಕಿದ ಕ್ರಾಂತಿಕಾರಿಯಾಗಿರುವುದೆಂಬುದನ್ನು ಅದೆಂದಿಗೂ ಮರೆಯುವಂತಿಲ್ಲ. ಇದೊಂದು ವಿಶಿಷ್ಟ ವಿಚಾರ ಕ್ರಾಂತಿಯಲ್ಲವೆ? ವಾಸ್ತವ ದೃಷ್ಟಿಯುವಾದವಲ್ಲವೆ? ಸಂಸಾರ ವಾಸನೆ ಯಾರಿಗಿಲ್ಲ? ಇದು ಸ್ತ್ರೀ ಪುರುಷ ಸಮಾನ ಗುಣವಲ್ಲವೆ ? ಇಂತಿದ್ದು ಸ್ತ್ರೀಯರನ್ನೇ ಏಕಪಕ್ಷೀಯವಾಗಿ ಆರೋಪಿಸುವುದು ಯಾವ ನ್ಯಾಯ ? ಇದಲ್ಲದೆ "ಸ್ಥಿರಮಂಗಲ ಭೂಷಣಾಲಂಕೃತಾಂಗಯಾ, ಚಕ್ಷುರಾನಂದ ಲತಯಾ, ಸೌಭಾಗ್ಯ ಕುಲವಿದ್ಯಯಾ," ಎಂದು ಮಹಿಂತಾಗಿ ಸದ್ಭಾವಶೀಲತೆಯಿಂದ ನಿರೂಪಿಸಲಾಗಿದೆ. ಸ್ಥಿರವಾದ ಮಂಗಲವನ್ನುಂಟುಮಾಡುವ ಶೃಂಗಾರ ಭೂಷಣಾಲಂಕೃತಾಂಗಳು, ನೇತ್ರಾನಂದವನ್ನುಂಟು ಮಾಡುವ ಲತೆಯಂತಿರುವವಳು, ಸೌಭಾಗ್ಯವನ್ನೊದಗಿಸುವ ಕುಲವಿದ್ಯಾಸ್ವರೂಪಳು ಆಗಿರುವಳೆಂದು ಹೇಳಿರುವಲ್ಲಿ ಅದೆಂತಹ ಸದ್ಭಾವವಿದೆ ಶಿವಾಚಾರ್ಯನಿಗೆ ಸ್ತ್ರೀವಿಷಯದಲ್ಲಿ! ವಿಶ್ವನಿರ್ಮಾಣ ಕಾರ್ಯದಲ್ಲಿ ಸಂಸಾರ ಅಂದರೆ ಗೃಹಜೀವನ ನಿರ್ವಹಣದಲ್ಲಿ ಪುರುಷನೊಡನೆ ಸಹಧರ್ಮಿಣಿಯಾದ ಸ್ತ್ರೀ ಶಕ್ತಿಯನ್ನು ವಿಕಾರ ದೃಷ್ಟಿಯಿಂದ ನೋಡುವುದು ಆರೋಪಿಸುವುದು ಸರಿಯೆನಿಸದು. ಮೂಲಭೂತವಾಗಿ ಪ್ರಪಂಚ ಘಟಕರು ಸ್ತ್ರೀ ಪುರುಷರು. ಸಂಸಾರರಥವಾಹಕರು.

"ವಾಗರ್ಥಾವಿವ ಸಂಪೃಕ್ತೌ ವಾಗರ್ಥ: ಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥"

ಎಂದು ಕವಿ ಕಾಳಿದಾಸನು ಶಿವಶಕ್ತಿಯರು ಶಬ್ದಾರ್ಥಗಳಂತೆ ಜಗತ್ತಿನ ಅವಿಭಾಜ್ಯ ತಂದೆ ತಾಯಿಗಳೆಂದು ಹೇಳಿದರೆ, ಶಿವಯೋಗಿ ಶಿವಾಚಾರ್ಯ ಶಿವಾನುಭಾವಿಯು,

"ಯಾಮಾಹು: ಸರ್ವಲೋಕಾನಾಂ ಪ್ರಕೃತಿಂ ಶಾಸ್ತ್ರಪಾರಗಾಃ।
ತಾಂ ಧರ್ಮಚಾರಿಣೀಂ ಶಂಭೋ: ಪ್ರಣಮಾಮಿ ಪರಾಂ ಶಿವಾಂ॥"

ಪರಶಿವೆ ಸರ್ವಲೋಕ ಪ್ರಕೃತಿಯೆಂದು, ಸುಖದಾಯಕ ಶಿವನ ಧರ್ಮಚಾರಿಣಿಯೆಂದು ಹೇಳಿ ಶಿರಸ್ಸಾರೆ ನಮಿಸಿ, ಮನಸ್ಸಾರೆ ಮನ್ನಿಸಿದ್ದಾನೆ.

ಸಾಲದ್ದಕ್ಕೆ 'ಸಮಸ್ತಾನಾಂ ಶಿವಕರೀಂ ಶಿವಾಂ' ಎಂದು, 'ಪರಮಾನಂದ ಪ್ರಬೋಧಲಹರಿ' ಎಂದು, 'ಅಮೃತಾರ್ಥಂ ಪ್ರಪನ್ನಾನಾಂ ಯಾ ಸುವಿದ್ಯಾ ಪ್ರದಾಯಿನೀ । ಅಹರ್ನಿಶಮಹಂ ವಂದೇ ತಾಮೀಶಾನ ಮನೋರಮಾಂ॥" ಎಂದು ಶಕ್ತಿ ಸತ್ತೆಯನ್ನು ಸತ್ವಶಾಲೀನತೆಯನ್ನು ನಿರೂಪಿಸಿ, ಅವಳನ್ನು ಹಗಲಿರುಳು ನಮಿಸುವೆನೆಂದು ಹೇಳಿದ್ದಾನೆ. ಅಲ್ಲದೆ, ಅಗಸ್ತ್ಯಾಶ್ರಮವನ್ನು ವರ್ಣಿಸುವಾಗ 'ಲೋಪಾಮುದ್ರಾಪದನ್ಯಾಸ ಚರಿತಾರ್ಥ ತಟಾಂಕತೈ:।' ಎಂದು ಅಗಸ್ತ್ಯಮುನಿಪತ್ನಿ ಲೋಪಾಮುದ್ರೆಯ ಪಾದನ್ಯಾಸಪಾವನತೆಯನ್ನು ಪ್ರಕಟಿಸಿದ್ದಾನೆ. ಅಲ್ಲದೆ ಅಗಸ್ತ್ಯಾಶ್ರಮಕ್ಕೆ ಆಗಮಿಸಿದ ಆದಿರೇಣುಕ ಶಿವಾಚಾರ್ಯರನ್ನು ಉಪಚರಿಸುವಾಗ "ಲೋಪಾಮುದ್ರಾಕರಾನೀತೈರುದಕೈರತಿ ಪಾವನೈಃ। ಪಾದೌ ಪ್ರಕ್ಷಾಲಯಾಮಾಸ ಸ ತಸ್ಯ ಶಿವಯೋಗಿನಃ॥" ಎಂದು ಹೇಳಿ ಲೋಪಾಮುದ್ರೆಯ ಪಾದ ಪಾವನತೆಯಂತೆ ಹಸ್ತ ಪಾವನತೆಯನ್ನೂ ಪ್ರತಿಪಾದಿಸಿದ್ದಾನೆ ವಿಶ್ವಜೀವನ ಘಟಕ ಸ್ತ್ರೀ ಶಕ್ತಿಯನ್ನು ದರ್ಶಿಸುವ ದೃಷ್ಟಿ ದಿವ್ಯತೆಯನ್ನಿಲ್ಲಿ ಕಾಣಬೇಕು. ಸ್ತ್ರೀ ಶಕ್ತಿಯನ್ನು ತೃಣೀಕರಿಸಿದರೆ ವಿಶ್ವವನ್ನೆ ವಿಶ್ವೇಶ್ವರನನ್ನೇ ತೃಣೀಕರಿಸಿದಂತೆ! 'ವಿಶ್ವೋಲ್ಲಂಘನ ವಿಭ್ರಮಃ' ವಿಶ್ವವನ್ನು ಉಲ್ಲಂಘಿಸಿ ನುಡಿಯುವುದು ಒಂದು ವಿಭ್ರಮವಂತೆ! ಅಂದರೆ ವಿಶೇಷ ಭ್ರಾಂತಿಯಂತೆ! 'ಸಮಸ್ತ ಲೋಕಸಂದಾಹ ಮಹಾನಲವಂತೆ ತಾಪತ್ರಯ !' ತಾಪತ್ರಯಕ್ಕೊಳಗಾಗುವಿಕೆ ವೈಯಕ್ತಿಕ ಮಾತ್ರವಲ್ಲ ವಿಶ್ವಕ್ಕೆ ಹಾನಿ! ರೇಣುಕಗೀತೆಯ ಸಿದ್ಧಾಂತ 'ಸಕಲಲೋಕ ಮಹೋಪಕಾರಕ' ! ಮತ್ತು ಶಿವಜ್ಞಾನಕಾರಕ!! ಶಿವಶಕ್ತಿ ಸಮುತ್ಪನ್ನವಾದ ಈ ಪ್ರಪಂಚ ಪರಿಶುದ್ಧ! ಪ್ರಪಂಚ ಕೆಟ್ಟದ್ದಾಗುವುದು ಮಾನವರ ದುರ್ಗುಣ ದುರ್ವಾಸನೆಗಳಿಂದ! ವಾಸ್ತವವಾಗಿ ವಿಶ್ವ (ಪ್ರಪಂಚ)ವು ಭೋಜ್ಯ. ಅಂದರೆ ಸುಖಾನುಭವಕ್ಕೆ ಯೋಗ್ಯವಾದ ವಸ್ತು ಅಥವಾ ಪದಾರ್ಥ!

"ಅತ್ಯಂತ ಗೂಢ ಚೈತನ್ಯಂ ಜಡಮವ್ಯಕ್ತಮುಚ್ಯತೇ" ಈ ಜಗತ್ತು ಕೇವಲ ಜಡವಲ್ಲ; ಜಗತ್ತಿನ ಪ್ರತಿ ಅಣು ಅಣುವಿನಲ್ಲಿಯೂ ಅತ್ಯಂತಗೂಢ ಚೈತನ್ಯವಿದೆಯೆಂಬ ವಿಜ್ಞಾನ ಎಂಟನೆಯ ಶತಮಾನದ ರೇಣುಕಗೀತೆಯದು.

ಪ್ರಪಂಚದಲ್ಲಿ ಅಂದರೆ ಸಂಸಾರ ಚಕ್ರದಲ್ಲಿ ಮಾನವರು ತಂತಮ್ಮ ಕರ್ಮಾನುಸಾರವಾಗಿ ಸಿಕ್ಕು ಬಿದ್ದು ಬಳಲುತ್ತಿರುವರಲ್ಲದೆ ಇದಕ್ಕೆ ಪ್ರಪಂಚ ಕಾರಣವಲ್ಲ.

"ಪರಿಭ್ರಮಂತಿ ಸಂಸಾರೇ ನಿಜಕರ್ಮಾನು ಸಾರತಃ ।
ದೇವತಿರ್ಯಙ್ಮನುಷ್ಯಾದಿ ನಾನಾ ಯೋನಿವಿಭೇದತಃ।
ಚಕ್ರನೇಮಿಕ್ರಮೇಣೈವ ಭ್ರಮಂತಿ ಹಿ ಶರೀರಿಣಃ।
ಜಾತ್ಯಾಯುರ್ಭೋಗ ವೈಷಮ್ಯಕಾರಣಂ ಕರ್ಮ ಕೇವಲಂ॥" –ರೇ ಗೀತೆ

ವಿಶ್ವಾತ್ಮ ಪರಶಿವ ಬ್ರಹ್ಮೈಕ್ಯಜ್ಞಾನವರ್ಜಿತರಾದ ಅವಿದ್ಯಾ ಮೋಹಿತರ ವಿಶ್ವಜೀವಿನಪದು. ಸಂಸಾರ ಪರಿಭ್ರಮಣವಿದು. ದೇವ, ಮಾನವ, ದಾನವ, ಪಶು, ಪಕ್ಷಿ, ಕ್ರಿಮಿ, ಕೀಟಾದಿ ಎಂಬತ್ತು ನಾಲ್ಕು ಲಕ್ಷ ಜೀವಿಗಳ ಯೋನಿಗಳಲ್ಲಿ ಹುಟ್ಟುದಳೆದು ಪಡಬಾರದ ಕಷ್ಟಗಳ ಪಟ್ಟು ಸತ್ತು ಕರ್ಮಾನುಸಾರವಾಗಿ ಚಕ್ರನೇಮಿಕ್ರಮದಂತೆ ಸುತ್ತುವರು ಮತ್ತೆ ಮತ್ತೆ ! ಜಾತಿ ಆಯುಷ್ಯ ಭೋಗ ರೋಗಾದಿ ವೈಷಮ್ಯ ಕಾರಣ ಕರ್ಮ. ಸಂಚಿತ ಆಗಾಮಿ ಪ್ರಾರಬ್ಧ ಕರ್ಮಗಳನ್ನು ಕಳೆದುಕೊಳ್ಳದೆ ಹುಟ್ಟು ಸಾವಿನ ಚಕ್ರದಿಂದ ತಪ್ಪಿಸಿಕೊಳ್ಳದೆ ಭ್ರಮಣದ ಬಿಡುಗಡೆ ಸಾಧ್ಯವಿಲ್ಲ. ಹಿತಮಾರ್ಗೋಪದೇಶಕ ದೇಶಿಕ. ಆತನ ಕಾರುಣ್ಯವಿಲ್ಲದೆ ಕರ್ಮನಾಶವಿಲ್ಲ. ಧರ್ಮಪೋಷಣವಿಲ್ಲ. ಅವಿದ್ಯಾದಿಪಂಚಕ್ಲೇಶ.–ಆಧಿಭೌತಿಕಾದಿ ತಾಪತ್ರಯಗಳು ತೊಲಗುವಂತಿಲ್ಲ. ವಿಶ್ವ ಕಾರಣವಾದ ಚಿದ್ರೂಪ ಪರಶಿವತತ್ತ್ವ ಜ್ಞಾನಾನುಭವವಾಗುವಂತಿಲ್ಲ.

"ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಂ।
ನಿರಸ್ತ ವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಂ॥
ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸ ಕಲಾಮಯಂ।
ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿರುಪಾಸಿತಂ॥
ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ।
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರೇತ್ಯಾಹುರಾಗಮಾಃ॥

ಅಪರಿಚ್ಛಿನ್ನಮವ್ಯಕ್ತಂ ಲಿಂಗಂಬ್ರಹ್ಮ ಸನಾತನಂ।
ಉಪಾಸನಾರ್ಥಮಂತಃಸ್ಥಂ ಪರಿಚ್ಛಿನ್ನಂ ಸ್ವಮಾಯಯಾ॥
ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ ॥"—
ರೇ. ಗೀತೆ

ಚಿದ್ರೂಪವಾದ ಪರಶಿವ ತತ್ತ್ವ ವಿಶ್ವಕಾರಣವಾಗಿದೆ. ನಿಷ್ಕಲವೂ ನಿರ್ವಿಕಲ್ಪಕವೂ ಆಗಿ ವಿಶ್ವ ಕಾಲುಷ್ಯವಿರಹಿತವಾಗಿದೆ. ಅಲ್ಲದೆ ಅದು ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸ ಕಲಾಮಯವಾಗಿದೆ. ಅಪ್ರಮೇಯವೂ ಅನಿರ್ದೇಶವೂ ಆಗಿದ್ದರೂ ಮುಮುಕ್ಷುಗಳಿಂದ ಉಪಾಸಿತವಾಗಿದೆ. ಅದು ಸರ್ವದೇಹಿಗಳ ಮೂಲಾಧಾರ, ಹೃದಯ ಭ್ರೂಮಧ್ಯಗಳಲ್ಲಿ ಜ್ಯೋತಿರ್ಲಿಂಗವಾಗಿ ನಿರಂತರ ಬೆಳಗುತ್ತಿದೆ. ಅದನ್ನೆ ಪರಶಿವಬ್ರಹ್ಮವೆಂದು ಆಗಮಗಳು ಹೇಳುತ್ತಿವೆ. ಪರಶಿವಬ್ರಹ್ಮ ಸ್ವರೂಪ ಲಿಂಗವು ಸನಾತನವು ಅವ್ಯಕ್ತವು ಅಪರಿಚ್ಛಿನ್ನವೂ ಆಗಿದ್ದು ಉಪಾಸನಾರ್ಥವಾಗಿ ಸ್ವಶಕ್ತಿಯಿಂದ ಪರಿಚ್ಛಿನ್ನ (ಚಳುಕ) ವಾಗಿ ಅಂತಸ್ಥವಾಗಿದೆ, ಅದು ವ್ಯಕ್ತಿ ನಿಷ್ಠವಾಗಿದ್ದರೂ. ಸಮಷ್ಟಿಯಾದ ಈ ಚರಾಚರ ಜಗತ್ತು ಅದರಲ್ಲಿ ಲೀನವಾಗಿದ್ದು ಮತ್ತೆ ಮತ್ತೆ ಉತ್ಪತ್ತಿಯನ್ನು ಪಡೆಯುತ್ತದೆ. ಅದನ್ನೇ ಶಾಶ್ವತವಾದ ಪರಶಿವ ಬ್ರಹ್ಮ ಸ್ವರೂಪ ಲಿಂಗವೆಂದು ಸತ್ತಾನಂದ ಚಿದಾತ್ಮಕವೆಂದು ಹೇಳಲಾಗುತ್ತದೆ. ಜಗನ್ಮಯವಾದ ಜ್ಯೋತಿರ್ಲಿಂಗಾನುಸಂಧಾನವೇ ಅಂತರಂಗದ ಲಿಂಗಧಾರಣ ! ಲಿಂಗ ಪ್ರಾಣಿಯಾಗುವುದೆಂದರೆ ವಿಶ್ವಪ್ರೇಮಿಯಾಗುವುದೆಂದೇ ಅರ್ಥ ! ಮತ್ತು ಅಂತರಧ್ವನಿ !! ಇದರಿಂದಾಗಿ ಭಕ್ತಮಾರ್ಗಸ್ಥಲಿಗಳು ಶಿವಯಾತ್ರೆಯಲ್ಲಿರುವಾಗ ಶಿವಸ್ಥಾನ ಶಿವ ಶಿವತೀರ್ಥಗಳನ್ನು ಸಾತಿಶಯ ಸಂತೋಷದಿಂದ ಪೋಷಿಸುವ ಮೂಲಕ ಸೇವೆಯನ್ನು ಸಲ್ಲಿಸಬೇಕು. ಮತ್ತು ಶಿವಕ್ಷೇತ್ರೋತ್ಸವ ಮಹಾಯಾತ್ರಾದರ್ಶನ ಕಾಂಕ್ಷಿಗಳಿಗೆ ಮಾರ್ಗದಲ್ಲಿ ದಾಸೋಹವನ್ನಿರಿಸಬೇಕು. ಒಬ್ಬ ಶಿವಯೋಗಿಯ ತೃಪ್ತಿಯೆ ಶಿವನ ತೃಪ್ತಿ; ಶಿವನತೃಪ್ತಿಯಿಂದ ಶಿವಮಯವಾದ ಚರಾಚರ ವಿಶ್ವವೇ ತೃಪ್ತಿಯನ್ನು ಪಡೆಯುತ್ತದೆ ಅದರಿಂದ ಯಾವ ಬಗೆಯ ಕಾರ್ಯವನ್ನು ಮಾಡಿಯಾದರೂ ಶಿವಯೋಗಿಗೆ ಸದಾಕಾಲ

ಪ್ರಸಾದತೃಪ್ತಿಯನ್ನು ಮಾಡಬೇಕು. ಶಿವನಿಗೂ ಶಿವಯೋಗಿಗೂ ವಿಶ್ವಕ್ಕೂ ಸಾತತ್ಯ ಸಂಬಂಧವಿದೆ.

'' ಪೃಥಿವ್ಯಾದ್ಯಾತ್ಮ ಪರ್ಯಂತಪ್ರಪಂಚೋ ಹ್ಯಷ್ಟಧಾ ಸ್ಥಿತ : !
ತನುರ್ಶೀಶಸ್ಯ ಚಾತ್ಮಾಽಯಂ ಸರ್ವ್ವತತ್ತ್ವ ನಿಯಾಮಕ : ॥
ಆತ್ಮ ಭೂತಸ್ಯ ದೇವಸ್ಯ ನಾಽಭೇದೋ ನ ಪೃಥಕ್‌ಸ್ಥಿತಿ : ॥

ಅಭವನಿಗೆ ಅಷ್ಟಮೂರ್ತಿತ್ವಭಾವ ಸಾಧನಾವಸ್ಥೆಯಲ್ಲಿರುತ್ತದೆ. ಪಂಚ ಮಹಾಭೂತಗಳು ರವಿ. ಶಶಿ. ಆತ್ಮ ಇವು ಅಷ್ಟವಿಧಗಳು. ಇವೆ ಈ ಪ್ರಪಂಚ. ಸರ್ವತತ್ತ್ವ ನಿಯಾಮಕನಾದ ಈಶನಿಗೆ ಈ ಅಷ್ಟವಿಧಗಳು ಶರೀರ ವಾಗಿವೆ. ಇದರಿಂದ ಈಶನು ಅಷ್ಟಮೂರ್ತಿ ಸ್ವರೂಪನಾಗಿ ದೇಹಾತ್ಮನ್ಯಾಯ ದಂತೆ ಭೇದಾಭೇದ ಸ್ಥಿತಿಯಲ್ಲಿರುತ್ತಾನೆಂದು ಸಾಧಕನು ಅಂದರೆ ಪೂರ್ಣಾ ವಸ್ಥೆಯನ್ನು ಪಡೆಯುವವನು ಭಾವಿಸುತ್ತಾನೆ. ಅದೇ ಮುಂದುವರಿದು ಶಿವ ಜಗನ್ಮಯ ಸ್ಥಲಕ್ಕೆ ಸೇರಿದಾಗ.

" ಯಸ್ಮಾದೇತತ್ ಸಮುತ್ಪನ್ನಂ ಮಹಾದೇವಾಚ್ಚರಾಚರಂ ।
ತಸ್ಮಾದೇತನ್ನ ಭಿದ್ಯೇತ ಯಥಾ ಕುಂಭಾದಿಕಂ ಮೃದ : ।
ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನ ಭಿದ್ಯತೇ ।
ಯಥಾ ತಂತು ಭಿರುತ್ಪನ್ನ: ಪಟಸ್ತಂತುಮಯ: ಸ್ಮೃತ : ।
ತಥಾ ಶಿವಾತ್ ಸಮುತ್ಪನ್ನಂ ಶಿವ ಏವ ಚರಾಚರಂ ॥
ಆತ್ಮ ಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತ: ।
ಕುಟೀಭಾವಾದ್ಯಥಾ ಭಾತಿ ಪಟ : ಸ್ವಸ್ಯಪ್ರಸಾರಣಾತ್ ॥
ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪ : ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥ "

ರೇ. ಗೀತೆ

ಮಹಾದೇವನಿಂದ ಉತ್ಪತ್ತಿಗೊಂಡ ಈ ಚರಾಚರ ಜಗತ್ತು ಮಹಾ

ದೇವನಿಗೆ ಭಿನ್ನವಲ್ಲ; ಮಣ್ಣಿನಿಂದಾದ ಮಡಿಕೆ ಮಣ್ಣಿಗೆ ಭಿನ್ನವಲ್ಲ

ಶಿವತತ್ತ್ವದಿಂದ ಸಮುತ್ಪನ್ನವಾದ ಜಗತ್ತು ಶಿವತತ್ತ್ವಕ್ಕೆ ಬೇರೆಯಾಗದು; ಸಮುದ್ರದಿಂದಾದ ತೆರೆನೊರೆಗಳು ಸಮುದ್ರಕ್ಕೆ ಬೇರೆಯಾಗವು.

ತಂತುಗಳಿಂದಾದ ಪಟವು ತಂತುಮಯವೆ ಆಗಿರುವಂತೆ, ಶಿವನಿಂದಾದ ಚರಾಚರ ವಿಶ್ವವು ಶಿವನೇ ಆಗಿರುತ್ತದೆ; ಆಗಿದೆ.

ಶಿವನು ತನ್ನ ಆತ್ಮ ಶಕ್ತಿವಿಕಾಸದಿಂದ ವಿಶ್ವಾತ್ಮನಾಗಿದ್ದಾನೆ; ಸುತ್ತಿದ ಚಾಪೆ ಬಿಚ್ಚಿ ಹಾಸಿದ ಚಾಪೆಯಂತೆ ವಿಶ್ವ ವಿಕಾಸವಾಗಿದೆ.

ಎಲೆ ಹೂವು ಹಣ್ಣು ರೆಂಬೆಗಳ ರೂಪದಲ್ಲಿ ಮರ ಇರುವಂತೆ; ನೆಲ ನೀರು ಬೆಂಕಿ ಗಾಳಿ ಬಾನ್ ಮುಂತಾದವುಗಳ ರೂಪದಲ್ಲಿ ಶಿವನೊಬ್ಬನೇ ಇರುತ್ತಾನೆ.

ಓ ಈ ಉಪಮೆಗಳು ಅದೆಷ್ಟು ಚನ್ನ, ಅದೆಷ್ಟು ಅರ್ಥಪೂರ್ಣ. ಈ ಕಾವ್ಯಮಯ ಶ್ಲೋಕಗಳನ್ನು ಓದಿ ಅರ್ಥವಿಸಿಕೊಳ್ಳುವಾಗ, ಅರ್ಥವಿಸಿಕೊಂಡು ಆನಂದಿಸುವಾಗ ಕವಿಶ್ರೇಷ್ಠ ಕಾಳಿದಾಸನ ನೆನಪು ಬಂದು ನಿಲ್ಲುತ್ತದೆ. ವಿಶ್ವ–ವಿಶ್ವೇಶ್ವರ ಸನ್ನಿಹಿತ ಸಂಬಂಧ ಸೂಚಕ ಸುಂದರ ಹೋಲುಮೆಯ ಬಗೆ ಬಗೆಯ ಚಿತ್ತಾರಗಳನ್ನು ಚಿತ್ತಭಿತ್ತಿಯ ಮೇಲೆ ಅಚ್ಚಳಿಯದಂತೆ ಅಚ್ಚೊತ್ತುವಂತೆಸಗಿದ ಶಿವಾಚಾರ್ಯ ಶಿವಕವಿ ಶಿವಾನುಭಾವಿಯ ಅಪ್ರತಿಮ ಪ್ರತಿಭೆಯ ಚಲುವ ಚಿತ್ತಾರವೂ ಅಚ್ಚಳಿಯದಂತಿದ್ದು ಚಿತ್ತವನ್ನು ಚೇತನಿಸುತ್ತದೆ. ಒಂದು ಬಹಿರಂಗದ ಬೆಡಗಿನ ದರ್ಶನ; ಇನ್ನೊಂದು ಅಂತರಂಗದ ಸತ್ಯ ಶಿವ ಸೌಂದರ್ಯ ಸಂದರ್ಶನ. ವಿಶ್ವ–ವಿಶ್ವೇಶ್ವರ ಸಂಬಂಧ ಪರಿಜ್ಞಾನ ಪರಿಪಕ್ವಗೊಂಡಿದೆ; ಪರಿಣಾಮಕಾರಿಯಾಗಿದೆ. ಅದು ಅಲಂಕಾರಿಕ ಪರಿಜ್ಞಾನ; ಪರಿಭಾವ! ವಿಶ್ವಮೀಮಾಂಸೆಗೆ ಮೆಚ್ಚಿಗೆಯಾಗುವ ಭಾವಾನುಭಾವಗಳಿಗೆ ಒಗ್ಗುವ ಪರಾಮರ್ಶಶಕ್ತಿ ಕಾವ್ಯಮಯವಾಗಿದೆ; ಭಾವ್ಯವೂ ಆಗಿದೆ. ಅಂದರೆ ಭಾವೋತ್ತೇಜಕವೂ ಆಗಿದೆ. ಶಿವ–ವಿಶ್ವಗಳ ಉಪಮೇಯಗಳು, ಮಣ್ಣು–ಮಡಿಕೆ, ಮುನ್ನೀರು–ನೊರೆತೆರೆ, ಎಳೆ-ಅರಿವೆ, ಸುತ್ತಿದ ಚಾಪೆ-ಬಿಚ್ಚಿದ ಚಾಪೆ. ಮರ–ಮರದ ಅಂಗಾಂಗ ಈ ಅಯ್ದು ಉಪಮಾನಗಳು, ಶಿವ ಚಿಗನ್ಮಯತ್ವವನ್ನು ಕಮನೀಯವಾಗಿ ಕಣ್ಣಿಗೆ

ಕಟ್ಟಿದಂತೆ ಮಾಡಿ ಭಾವೋದ್ದೀಪನಗೊಳಿಸುವ ಶಿವಕವಿ ಶಿವಾಚಾರ್ಯರ ಉಜ್ವಲ ಪ್ರತಿಭೆ ಉಪಮೆಗೆ ನಿಲುಕದ್ದು. ಅಂತೆಯೆ ಆತನ ವ್ಯಕ್ತಿತ್ವವೂ ಅಷ್ಟೆ !

"ಹಸ್ತಪಾದಾದಿಸಾಮ್ಯೇನ ನೇತರೈ: ಸದೃಶಂ ವದೇತ್ ।
ಆಚಾರ್ಯಂ ಜ್ಞಾನದಂ ಶುದ್ಧಂ ಶಿವರೂಪತಯಾ ಸ್ಥಿತಂ॥ "
–ರೇ. ಗೀತೆ

ಎಂಬೀ ರೇಣುಕ ಗೀತಾವಾಣಿ ಗೇಯಕಾರನಾದ ಶಿವಯೋಗಿ ಶಿವಾಚಾರ್ಯನನ್ನ ಅಧಿಕರಿಸಿ ಹಾಡಿದಂತಿದೆ. ಸತ್ಯಕ್ಕೂ ಶಿವಾಚಾರ್ಯನ ಸಚ್ಚಿದ್‌ಘನ ವ್ಯಕ್ತಿತ್ವಕ್ಕೆ ಸದೃಶರು ಬೇರೊಬ್ಬರಿಲ್ಲ. ವಿಶ್ವದ ಬಗೆಗೆ ಶುದ್ಧವೂ ಪ್ರಬುದ್ಧವೂ ಆದ ಜ್ಞಾನಪ್ರದ ಶಿವಾಚಾರ್ಯನು ಶಿವಸ್ವರೂಪನಾಗಿಯೇ ಇದ್ದನು ಇರುವನು- ಎಂದರೆ ತೆಗೆದುಹಾಕುವ ಮಾತಲ್ಲ. ವಿಶ್ವದ ಬಗೆಗೆ ಸಹೃದಯರನ್ನು ಆತನ ಎತ್ತರಕ್ಕೆ ಶಿವಸ್ವರೂಪಕ್ಕೆ ಏರಿಸಿ ಸಂತಸಗೊಳಿಸುವ ಅಸಾಧಾರಣ ಶಕ್ತಿ ಶಿವಯೋಗಿ ಶಿವಾಚಾರ್ಯನಿಗಿದೆ ಖಂಡಿತವಾಗಿ! ಇದೋ ಇಲ್ಲಿ ನಿಟ್ಟಿಸಿರಿ ಆತನು ತೋರುವ ವಿಶ್ವದ ಶಿವರೂಪ ಎಂತಹದು, ಎಲ್ಲಿಯದು ? ಎಂಬ ಕೇಳಿಕೆಗೆ–

"ಪೀಠಿಕಾ ಪರಮಾಶಕ್ತಿರ್ಲಿಂಗಂ ಸಾಕ್ಷಾತ್ಪರ: ಶಿವ:।
ಶಿವಶಕ್ತಿ ಸಮಾಯೋಗಂ ವಿಶ್ವಂ ಲಿಂಗಂ ತದುಚ್ಯತೇ ॥
ವಿಶ್ವಾಧಿಪತ್ಯ ಮೀಶಸ್ಯಲಿಂಗ ಮೂರ್ತೇ: ಸ್ವಭಾವಜಂ ।
ಅನನ್ಯದೇವ ಸಾದೃಶ್ಯ ಶ್ರುತಿರಾಹಂ ಸನಾತನೀ ॥ "
ರೇ. ಗೀತೆ

ವಿಶ್ವಮಯ ಶಿವ ಅನಿರ್ದೇಶನಲ್ಲ; ಎಲ್ಲಿಯೋ ದೂರ ದೂರ ಇರುವವನಲ್ಲ, ವಿಶ್ವವನ್ನೊಳಗೊಂಡ ವಿಶ್ವೇಶ್ವರನು ಕರಸ್ಥಲದ ಕುರುಹಾಗಿಯೇ ಇರುವನು. ಅಲ್ಲಿ ಇಲ್ಲಿ ಬೆದಕ ಬೇಕಾದುದಿಲ್ಲ. ಕಣ್ಣ ಮುಂದೆಯೇ ಇದೆ ಕರದ ಕುರುಹಾಗಿ ! ಅದರ ಪೀಠಕೆ ಪರಾಶಕ್ತಿ, ಲಿಂಗ ( ಗೋಳಕ ) ಸಾಕ್ಷಾತ್ ಪರಶಿವ. ಈ ಶಿವಶಕ್ತಿ ಸಮಾಯೋಗವೆ ವಿಶ್ವಲಿಂಗ ! ಈ ಶಿವ

ಲಿಂಗಮೂರ್ತಿಗೆ ವಿಶ್ವಾಧಿಪತ್ಯ ಸ್ವಾಭಾವಿಕವಾಗಿದೆ, ಇದರಿಂದಾಗಿ ಇಷ್ಟರೂಪ ವಿಶ್ವಲಿಂಗಕ್ಕೆ ಇತರ ದೇವರಸಾದೃಶ್ಯವಿಲ್ಲೆಂದು ಸನಾತನ ಶ್ರುತಿಯೇ ಹೇಳುತ್ತದೆ. " ಯಶ್ಛಂದಸಾಂ ವೃಷಭೋ ವಿಶ್ವರೂಪ: । ... ಅಮೃತಸ್ಯ ದೇವ ಧಾರಣೋ ಭೂಯಾಸಂ । ...." ಈ ಶ್ರುತಿ ವಿಶ್ವರೂಪ ದೇವ (ಲಿಂಗ) ಧಾರಣ ನಿರೂಪಣ ಮಾಡುವಂತೆ ಹೇಳಿದೆಯೆಂದು ವೀರಶೈವ ಭಾಷ್ಯಕರ್ತರಾದ ಸನಾತನ ಶಿವಾಚಾರ್ಯರು, ನಿರೂಪಿಸಿದ್ದಾರೆ.

"ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತ.।
ನಿರ್ಧೂತಮಲ ಸಂಸರ್ಗಾಸ್ತೇ ಸ್ಮೃತಾ: ಶಿವಯೋಗಿನ:॥ –ರೇ. ಗೀತೆ

ವಿಶ್ವವೂ ಜಡರೂಪವಲ್ಲ,-ಚಿನ್ಮೂಪವೆಂದು ತಮ್ಮ ಶಿವಯೋಗ್ಯ ಸಾಮರ್ಥ್ಯದಿಂದ ಕಂಡವರು ಮಲ ಸಂಸ್ಪರ್ಶರಹಿತರಾಗಿ ಅವರೇ ಸತ್ಯ ಶಿವಯೋಗಿಗಳೆಂದು ಹೇಳಿಸಿಕೊಳ್ಳುವರೆಂದು ತಮ್ಮ ರೇಣುಕ ಗೀತೆಯಲ್ಲಿ ಶಿವಯೋಗಿ ಶಿವಾಚಾರ್ಯರು ನಿರೂಪಿಸಿ ಚಿನ್ಮಯ ಜಗತ್ತಿನ ಘನತೆಯನ್ನು ಸಾರಿದ್ದಾರೆ. ಜಗದ ಬಗೆಗೆ ಅವರ ದೃಷ್ಟಿ ಅದೆಷ್ಟು ದಿವ್ಯ! ಅವರ ಆ ದಿವ್ಯ ದೃಷ್ಟಿಯಲ್ಲಿ ಈ ಜಗಜ್ಜಾಲವೂ ಚಿದ್ರೂಪಲಿಂಗವಾಗಿ ಗೋಚರಿಸಿದೆ. ಅವರ ಆ ದಿವ್ಯದೃಷ್ಟಿ ಅವರ ಶಿವಯೋಗ ಲಭ್ಯ; ಅಂತೆಯೆ ಅದು ದಿಬ್ಯ. ಶಿವಯೋಗ ಅವರಿಗೆ ಅವರ ಶಿವಾಚಾರ್ಯವಂಶ ಪರಂಪರೆಯಿಂದ ಸಹಜವಾಗಿ ಬಂದುದಾಗಿದ್ದಿತು. ಅದರಿಂದ ಅವರು ಸತ್ಯ ಶಿವಯೋಗಿಗಳಾಗಿದ್ದರು; ಸಂದೇಹವಿಲ್ಲದೆ ನಿರ್ಮಲಾತ್ಮರಾಗಿದ್ದರು. ಚಿದಾನಂದ ಪರಾಕಾಶ ಶಿವಾನುಭವ ಯೋಗಿಗಳಾಗಿದ್ದರು." ವಿಸ್ವತತ್ತ್ವಜ್ಞಾನಿಗಳಾಗಿದ್ದರು. ಅಂತೆಯೆ ವಿಶ್ವ ವಿಚಾರಾನುಭವಗಳ ಸಾಂದ್ರತೆಯುಳ್ಳ ಅರ್ಥವತ್ತತೆಯುಳ್ಳ ರೇಣುಕಗೀತೆಯನ್ನು ರಚಿಸಿ ವಿಶ್ವಗೀತೆಯನ್ನಾಗಿಸಿದರು. ಸಾಕಷ್ಟು ಸರ್ವೋನ್ನತಭಾವದ ಸಾಂದ್ರತೆಯಿಂದ ತಾತ್ತ್ವಿಕ ತೀವ್ರತೆಯಿಂದ ವೈಚಾರಿಕ ವಿಶೇಷತೆಯಿಂದ ಉದಾತ್ತೀಕರಿಸಿರುವರು. ಊರ್ಜಿತ ಸತ್ವಶಾಲಿಯನ್ನಾಗಿಸಿರುವರು. ಪರಶಿವ ಪರಾಶಕ್ತಿ ಸ್ವರೂಪವನ್ನಾಗಿಸಿರುವರು. ಅದೊಂದು ಅವರದೇ ಆದ ಅಸಾಧಾರಣ ಸಾಮರ್ಥ್ಯ. ಅದನ್ನು ಇನ್ನಷ್ಟು ವಿವರವಾಗಿ ವಿಲೋಕಿಸೋಣ:

# ರೇಣುಕಗೀತೆ ವಿಶ್ವಗೀತೆ !

'ಪ್ರಸಾದೇ ಶಾಂಭವೇ ಸಿದ್ಧೇ ಪರಮಾನಂದ ಕಾರಣೇ ।
ಸರ್ವಂ ಶಿವಮಯಂ ವಿಶ್ವಂ ದೃಶ್ಯತೇ ನಾತ್ರ ಸಂಶಯಃ ।

ಪರಮಾನಂದ ಕಾರಣವಾದ ಪರಶಿವನ ಪ್ರಸಾದ ಪ್ರಾಪ್ತಿಸಲು. ಈ ವಿಶ್ವವೆಲ್ಲ ಶಿವಮಯವಾಗಿ ಕಾಣುವಲ್ಲಿ ಯಾವ ಸಂಶಯವಿಲ್ಲ.

ರೇಣುಕ ಗೀತೆಯ ರಚಕರಾದ ಶಿವಯೋಗಿ ಶಿವಾಚಾರ್ಯರಿಗೆ ದಿಟಕ್ಕೂ ಪರಶಿವನ ಪರಮಾನಂದ ಪ್ರದವಾದ ಪ್ರಸಾದ ಸಿದ್ಧಿಸಿದ್ದಿತು. ಆದರಿಂದಲೇ ಅವರಿಗೆ ಈ ವಿಶ್ವವೆಲ್ಲ ಶಿವಮಯವಾಗಿ ಕಂಡಿದೆ. ಕಂಡಂತೆ ಘನಗಂಭಿರ ವಾಗಿ ಗೀತಿಸಹಚ್ಚಿದೆ, ಅವರ ಈ ರೇಣುಕ ಗೀತೆ ವಿಶ್ವಗೀತೆಯಾಗಿ ಪರಿಣಮಿಸಿದೆ. ಪ್ರಾರಂಭದಲ್ಲಿಯೇ "ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ । ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ॥" ಎಂದು ಧ್ವನಿಪೂರ್ಣ ತ್ರೈಲೋಕ್ಯ ಗೀತೆಯನ್ನು ಗೀತಿಸಿದೆ. ಪರಶಿವ ಬ್ರಹ್ಮಾಧರಿತ ವಿಶ್ವ ಚಿತ್ರವನ್ನು ಸತ್ಯ ಶಿವ ಸೌಂದರ್ಯ ಚಕ್ಷ್ವಾಕರ್ಷಕವಾಗಿದೆ. ಸಮುಲ್ಲೇಖನದಿಂದ ಹೃದಯಸ್ಪರ್ಶಿಯಾಗಿದೆ. 'ಸಚ್ಚಿದಾನಂದ ಶಿವಾಯ ಬ್ರಹ್ಮಣೇ ನಮಃ' ಎಂದಿರುವುದರಿಂದ ತ್ರಯೋದಶಾಕ್ಷರ ಮಂತ್ರ ಗೀತವೂ ಆಗಿದೆ. 'ಸರ್ವ ಶಿವಮಯಂ ವಿಶ್ವಂ' ಎಂಬೀ ಮೇಲಿನ ಶ್ಲೋಕದ ಮೂರ ನೆಯ ಪಾದ ಇಡೀ ಶ್ಲೋಕವನ್ನೆ ವಿಶ್ವಗೀತವನ್ನಾಗಿಸಿದೆ. ಪರಮಾನಂದ ಕಾರಣವಾದ ಸಿದ್ಧಪ್ರಸಾದ ಸಮೃದ್ಧ ಸಂತೃಪ್ತಿ ಪ್ರಾಪ್ತಿ ಸಮನಿಸುವಂತಾ ಗಿದೆ. ಬರೀ ಆನಂದವಲ್ಲ ಪರಮಾನಂದ ಕಾರಣವಾದಾಗ ಸಮೃದ್ಧ ಸಂತೃಪ್ತಿ ಪ್ರಾಪ್ತಿಸದೇನು ? ಶಿವಮಯ ವಿಶ್ವದರ್ಶನವಾಗದೇನು ? ಪ್ರಾಸಾದಿಕತೆ ಯಲ್ಲಿ ವಿಶ್ವದರ್ಶನ ಶಿವಮಯ; ಪರಮಾನಂದಮಯ.

"ಬಹಿರ್ವಾಸನಯಾ ವಿಶ್ವಂ ವಿಕಲ್ಪಾರ್ಥಂ ಪ್ರಕಾಶತೇ ।
ಅಂತರ್ವಾಸಿತಚಿತ್ತಾನಾಮಪತಾತ್ಮಾನಂದ: ಪ್ರಕಾಶತೇ॥
ಶಿವಾಭಿಧಂ ಪರಂ ಬ್ರಹ್ಮ ಚಿದ್ರೂಪಂ ಜಗದಾಸ್ಪದಂ।
ಅವ್ಯಕ್ತಂ ಲಿಂಗಮಿತ್ಯಹುರ್ಜಗತಾಂ ಮೂಲಕಾರಣಂ॥" —ರೇ. ಗೀತೆ

ವಿಶ್ವಾಂತರ್ಭರಿತ ಪರಶಿವಬ್ರಹ್ಮದ ಪರಿಭಾವವಿಲ್ಲದೆ ಬರೀ ಬಾಹ್ಯ ರೂಪವಾಸನೆಯಿಂದ ನೋಡಿದ ವಿಶ್ವವು ವಿಕಲ್ಪಾರ್ಥವನ್ನುಂಟು ಮಾಡುತ್ತದೆ. ಅಂದರೆ ಕೆಟ್ಟ ಕಲ್ಪನೆಯನ್ನು ಭೇದ ಸಂಶಯ ಬುದ್ಧಿಯನ್ನು ವಿಷಯವಾಸನೆ ಯನ್ನು ಉಂಟುಮಾಡುತ್ತದೆ. ಆದೇ ಅಂತರ್ವಾಸಿತ ಚಿತ್ತರಿಗೆ ಆತ್ಮಾನಂದ ವನ್ನುಂಟುಮಾಡುತ್ತದೆ. ಇಲ್ಲಿ ಬಳಸಿದ ವಾಸನಾಪದವು ಇಂದ್ರಿಯಾರ್ಥ, ಅತೀಂದ್ರಿಯಾರ್ಥಗಳೆರಡನ್ನೂ ಬೋಧಿಸುತ್ತದೆ. ಇಂದ್ರಿಯಾರ್ಥವು ವಿಕಾರ ಕಾರಣವು. ಅತೀಂದ್ರಿಯಾರ್ಥವು ಅಗೋಚರ. ಅಂದರೆ ಮಾತು ಮನಗಳಿಗೆ ಮೀರಿದ ಸರ್ವಸ್ವ ಸ್ವಾತ್ಮಾನಂದ ಕಾರಣವು. ವಿಶ್ವದ ಬಹಿರಂಗ ರೂಪ; ಅಂತರಂಗ ಸ್ವರೂಪ. ಪರಶಿವ ಬ್ರಹ್ಮದ ಚಿನ್ಮಯತೆಯೇ ಸ್ವರೂಪ. ಅದುವೆ ಈ ಜಗದಾಸ್ಪದ. ಜಗನ್ಮೂಲ ಕಾರಣವಾದ ಚಿತ್ಕಳೆಯೇ ಅವ್ಯಕ್ತಲಿಂಗ.

" ಜ್ಞಾಯತೇ ಲಿಂಗಮೇವೈಕಂ ಸರ್ವೈ: ಶಾಸ್ತ್ರೈ: ಸನಾತನೈಃ
ಬ್ರಹ್ಮೇತಿ ವಿಶ್ವಧಾಮೇತಿ ವಿಮುಕ್ತೇ: ಪದಮಿತ್ಯಪಿ ।
ಮುಕ್ತಿರೂಪಮಿದಂ ಲಿಂಗಮಿತಿ ಯಸ್ಯ ಮನಃಸ್ಥಿತಿ; ।
ಸ ಮುಕ್ತೋ ದೇಹಯೋಗೇಽಪಿ ಸಜ್ಞಾನೀ ಸಮಹಾಗುರು; ॥
ಅನಾದಿನಿಧನಂ ಲಿಂಗಂ ಕಾರಣಂ ಜಗತಾಮಿತಿ ।
ಯೇ ನ ಜಾನಂತಿ ತೇ ಮೂಢಾ ಮೋಕ್ಷಮಾರ್ಗ ಬಹಿಸ್ಕೃತಾ : ॥"
—ರೇ. ಗೀತೆ

ಈ ವಿಶ್ವಗೀತೆಯನ್ನು ವಿನ್ಯಸಿಸಿದ ಶಿವಾಚಾರ್ಯನ ಸ್ಫೂರ್ತವಾದ ಪ್ರಾತಿ ಭಚಕ್ಷುವನ್ನು ಪರಿಕಿಸಬೇಕು. ವಿಶ್ವಾಂತರ್ಗತವಾದ ಚಿಲ್ಲಿಂಗವೊಂದನ್ನೇ ಪರ ಬ್ರಹ್ಮವೆಂದು, ವಿಶ್ವಧಾಮವೆಂದು ಮುಕ್ತಿಪದವೆಂದು ಸನಾತನ ಸರ್ವಶಾಸ್ತ್ರ ಗಳು ತಿಳಿಯುತ್ತವೆ; ತಿಳಿದಿವೆ, ಚಿಲ್ಲಿಂಗವೇ ಮುಕ್ತರೂಪವೆಂದು ಮನದಲ್ಲಿ

ಮನನ ಮಾಡಿದಾತನು ದೇಹ ಧಾರಿಯಾಗಿದ್ದರೂ ಮುಕ್ತನಾಗುತ್ತಾನೆ. ಆತನೇ ಮಹಾಜ್ಞಾನೀ, ಆತನೆ ಮಹಾಗುರು ಆದ್ಯಂತ್ಯವಿಲ್ಲದ ಲಿಂಗವೇ ಜಗತ್ಕಾರಣವೆಂದು ತಿಳಿಯದವರು ಮೂಢರು. ಮತ್ತು ಮೋಕ್ಷ ಮಾರ್ಗ ಬಹಿಷ್ಕೃತರು. ಅಂದರೆ ಮೋಕ್ಷ ಮಾರ್ಗಕ್ಕೆ ಹೊರಗಾದವರು. "ಶಿವಾನಂದ ಪರಿಸ್ಫೂರ್ತಿ ರ್ಮುಕ್ತಿರಿತ್ಯಭಿಧಿಯತೇ" ಶಿವಯೋಗಿ ಶಿವಾಚಾರ್ಯನ ಮುಕ್ತಿ ಪದದ ನಿರುಕ್ತಿಯಿದು. ಈ ನಿರುಕ್ತಿಯಲ್ಲಿ ಆತನದೇ ಆದ ಅನುಭೂತಿ ಅಭಿವ್ಯಕ್ತಿಯಾಗಿದೆ. ಆತನು ಇತರರಿಗಿಂತ ಮೇಲಕ್ಕೆದ್ದು ಕಾಣುವ ಇಂತಹ ಮುತ್ತಿನಂತಹ ಮಾತುಗಳು ಲಾಕ್ಷಣಿಕ ಸೂತ್ರ ಸೂಕ್ತಿಗಳು ರೇಣುಕ ಗೀತೆಯುದ್ದಕ್ಕೂ ಅಲ್ಲಲ್ಲಿ ಶರಚ್ಚಂದ್ರ ಮರೀಚಿಕೆಗಳಂತೆ ಚೆಲ್ಲುವರಿದಿವೆ. ಅವನ್ನೆಲ್ಲ ಒಂದು ಕಡೆಗೆ ಜೋಡಿಸಿದಲ್ಲಿ ಒಂದು ದಿವ್ಯರತ್ನಾಹಾರವೇ ಆಗುತ್ತದೆ.

"ಶಿವಾನಂದ ಪರಿಸ್ಫೂರ್ತಿಯೇ ಮುಕ್ತಿ" ಸರ್ವಸಮದರ್ಶಿತ್ವರೂಪ ಶಿವಾದ್ವೈತಭಾವ ಜನ್ಯವಾದುದೆ ಶಿವಾನಂದ! ಆ ಶಿವಾನಂದದಿಂದುಂಟಾದ ಪರಿಸ್ಫೂರ್ತಿಯೇ ಮುಕ್ತಿ! ಸ್ಫುರಿತಭಾವಾವೇಶದ ಗಾಢತೆಯೇ ಪರಿಸ್ಫೂರ್ತಿ! ಅದುವೆ ಮಹಾಮುಕ್ತಿಯೋಗ. ಮುಕ್ತಿಗೆ ಸಾಮಾನ್ಯವಾಗಿ ಬಿಡುಗಡೆ ಎಂಬ ಅರ್ಥ ಇಲ್ಲಿ ಏತಕ್ಕೂ ಸಾಲದು. ಸಾಲದಕ್ಕೆ ಸಪ್ಪೆಯಾಗಿ ನಿಲ್ಲುತ್ತದೆ. ಪರಶಿವದ ಆನಂದ ಪರಮಾನಂದ; ಪೂರ್ಣಾಖಂಡಾನಂದ. ನಿತ್ಯಾನಂದ; ಸತ್ಯಾನಂದ. ಅದರ ಸ್ಫೂರ್ತಿ ಮಾತ್ರವಲ್ಲ, ಪರಿಸ್ಫೂರ್ತಿ; ಅತ್ಯುಚ್ಚ ಮಟ್ಟದ ಭವ್ಯವಾದ ಬೃಹತ್ತಾದ ಬ್ರಹ್ಮ ಸದೃಶವಾದ ಭಾವಾವೇಶ! ಪರಮಾನಂದದ ಪರಾತ್ಪರ ಪರಿಸ್ಫೂರ್ತಿರೂಪ ಮುಕ್ತಿಯ ಬಗೆಗೆ ಭಾಷ್ಯವ ಬರೆಯಲು ನಮ್ಮಲ್ಲಿ ಆ ನೀಳನಿಲವಿನ ಭಾಷೆಯಿಲ್ಲ; ಆ ಬಿತ್ತರದ ಭಾವವೂ ಇಲ್ಲ. ಸ್ಫೂರ್ತಿಯನ್ನೇ ಕಾಣದವರು ಆ ಪರಿಸ್ಫೂರ್ತಿಯ ಅನುಭವದ ಮಾತೆಲ್ಲಿ ? ಅದರಲ್ಲಿಯೂ ಪೂರ್ಣಾಖಂಡ ಪರಶಿವಾನಂದ ಪರಿಸ್ಫೂರ್ತಿಮುಕ್ತಿಯ ಮಾತೆಲ್ಲಿ ? ಮೌನವೇ ಮಹಾಕ್ರಿಯೆ !

ಆ ಮುಕ್ತಿಯ ಪಡೆದು ಮುಕ್ತರಾದವರ ಸರ್ವಸಮವೃತ್ತಿ–ಶಿವವೃತ್ತಿಯು-ಸಹಜ ವೃತ್ತಿಯು ಸತ್ಯ ಸಂಗತಿಯನ್ನು ವಿಶ್ವ ಶಿವ ಸಂಪತ್ತಿಯನ್ನು

ಆ ಪರಾಕಾಶ ಶಿವಾನುಭವಯೋಗಿಯ ಪರಿಭಾಷೆಯಲ್ಲಿಯೆ ಆಲಿಸಿ ಪರಿಣ ಮಿಸಬೇಕು.

"ಶಂಭೋರೇಕತ್ವಭಾವೇನ ಸರ್ವತ್ರ ಸಮದರ್ಶನಃ।
ಕುರ್ವನ್ನಪಿ ಮಹಾಕರ್ಮ ನ ತತ್ಫಲಮವಾಪ್ನುಯಾತ್॥
ಸುಕೃತೀ ದುಷ್ಕೃತೀ ವಾಪಿ ಬ್ರಾಹ್ಮಣೋ ವಾಽಂತ್ಯಜೋಽಪಿವಾ।
ಶಿವೈಕಭಾವಯುಕ್ತಾನಾಂ ಸದೃಶೋ ಭವತಿ ಧ್ರುವಂ॥
ಯದ್ಯತ್ಪಶ್ಯತಿ ಸಾಮೋದಂ ವಸ್ತು ಲೋಕೇಷು ದೇಶಿಕಃ।
ಶಿವದರ್ಶನ ಸಂಪತ್ತಿಸ್ತತ್ರ ತತ್ರ ಮಹಾತ್ಮನಃ॥
ಯದ್ಯಚ್ಚಿಂತಯತೇ ಯೋಗೀ ಮನಸಾ ಶುದ್ಧಭಾವನಃ।
ತತ್ತಚ್ಛಿವಮಯತ್ವೇನ ಶಿವಧ್ಯಾನಮುದಾಹೃತಂ॥
ಯತ್ಕಿಂಚಿದ್ಭಾಷಿತಂ ಲೋಕೇ ಸ್ವೇಚ್ಛಯಾ ಶಿವಯೋಗಿನಾ।
ಶಿವಸ್ತೋತ್ರಮಿದಂ ಸರ್ವಂ ಯಸ್ಮಾತ್ಸರ್ವಾತ್ಮಕಃ ಶಿವಃ॥" –ರೇ.ಗೀತೆ

ಅಚರ ವಿಶ್ವ, ಚರವಿಶ್ವ; ಅಚರ ವಿಶ್ವದಲ್ಲಿ ಶಿವಭಾವವಿರುವಂತೆ ಚರ ವಿಶ್ವದಲ್ಲಿ ಶಿವಭಾವದೊಡನೆ ಸಮಭಾವವಿದ್ದಾಗ ಬೇಕೆಂಬುದನ್ನು ರೇಣುಕ ಗೀತಾತ್ಮಕ ಈ ವಿಶ್ವಗೀತೋಕ್ತಿಗಳಲ್ಲಿ ವಿಭು ಭಾವದಲ್ಲಿ ವಿಹಿತವಾಗಿ ನಿರೂ ಪಿತವಾಗಿದೆ.

ಸಮದರ್ಶಿಯು ಸರ್ವತ್ರ–ಚರಾಚರ ವಿಶ್ವದಲ್ಲಿ ಶಿವನ ಏಕತ್ವ ಭಾವ ದಿಂದ ಮಹಾಕರ್ಮವನ್ನು ಮಾಡಿದರೂ ಅದರ ಫಲವನ್ನು ಪಡೆಯನು.

ಸುಕೃತಿಯಾಗಲಿ–ದುಷ್ಕೃತಿಯಾಗಲಿ, ಅಗ್ರಜನಾಗಲಿ–ಅಂತ್ಯಜನಾಗಲಿ, ಶಿವೈಕಭಾವವುಳ್ಳವರಿಗೆ ದಿಟವಾಗಿ ಸಮವಾಗಿ ಕಾಣುತ್ತಾನೆ.

ಮಹಾತ್ಮನಾದ ದೇಶಿಕನು ಲೋಕಗಳಲ್ಲಿ ಮೋದದಿಂದ ಯಾವ ಯಾವ ವಸ್ತುವನ್ನು ನೋಡುವನೋ ಅಲ್ಲೆಲ್ಲ ಶಿವದರ್ಶನ ಸಂಪತ್ತಿಯುಳ್ಳ ವನಾಗಿರುತ್ತಾನೆ.

ಶುದ್ಧಭಾವನೆಯುಳ್ಳ ಯೋಗಿಯು ಮನಸ್ಸಿನಿಂದ ಏನನ್ನು ನೆನೆವನೋ ಅಲ್ಲಲ್ಲಿ ಶಿವಮಯತ್ವವು ಸಿದ್ಧಿಸಿ ಆ ನೆನಹು ಶಿವಧ್ಯಾನವಾಗಿ ಪರಿಣಮಿಸುತ್ತದೆ.

ಶಿವಯೋಗಿಯು ತನ್ನಿಚ್ಛೆಯಿಂದ ಲೋಕದಲ್ಲಿ ಆಡಿದ ಕಲ್ಪವೂ ಕೂಡ ಶಿವಸ್ತೋತ್ರವಾಗಿ ಪರಿಣಮಿಸುತ್ತದೆ. ಏಕೆಂದರೆ ಶಿವನು ಸರ್ವಾತ್ಮಕನಾಗಿರುವುದರಿಂದಾಗಿ !

ಪರಿವಿಡಿದು ಕ್ರಿಯೆ ಭಾವ, ದೃಷ್ಟಿ, ಮನ ವಾಣಿಗಳು ಚರಾಚರ ವಿಶ್ವ ವಿಷಯದಲ್ಲಿ ವಿಶುದ್ಧವಾಗಿ ವಿಶಾಲವಾಗಿರಬೇಕೆಂಬುದನ್ನು ರೇಣುಕ ಗೀತೆಯ ಈ ಪಂಚಶ್ಲೋಕಗಳು ಪ್ರತಿಪಾದಿಸಿವೆ. ಕ್ರಿಯೆಯಲ್ಲಿ ಸಹಜತೆ, ಭಾವದಲ್ಲಿ ಸಮತೆ, ದೃಷ್ಟಿಯಲ್ಲಿ ಶಿವಮಯತೆ, ಮನದಲ್ಲಿ ಶುದ್ಧತೆ, ವಾಣಿಯಲ್ಲಿ! ಮಂತ್ರಮಯತೆ ಇದ್ದಾಗ ಬೇಕೆಂಬುದನ್ನು ನಿರೂಪಿಸಿದೆ. ಇಷ್ಟೇ ಅಲ್ಲ: ಶಿವಾಚಾರ ಸಂಪತ್ತಿ ಇಲ್ಲಿಗೆ ಮುಗಿಯಲಿಲ್ಲ.

"ಗಚ್ಛಂಸ್ತಿಷ್ಠನ್ ಸ್ವಪನ್ನಾಪಿ ಜಾಗ್ರದ್ವಾಽಪಿ ಮಹಾಮತಿ: ।
ಶಿವಜ್ಞಾನಸಮಾಯೋಗಾಚ್ಛಿವ ಪೂಜಾಪರ: ಸದಾ ॥
ಯಾ ಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಂ ॥
ಸಾ ಸಾ ಪೂಜಾಮಹೇಶಸ್ಯ ಸರ್ವದಾ ತದ್ಗತಾತ್ಮನಾಂ ॥
ವರ್ಣಾಶ್ರಮ ಸದಾಚಾರೈರ್ಜ್ಞಾನಿನಾಂ ಕಿಂ ಪ್ರಯೋಜನಂ ?।
ಲಾಕಿಕಸ್ತು ಸದಾಚಾರ : ಫಲಾಽಭಾವೇಽಪಿ ಭಾವ್ಯತೇ ॥

ನಡೆವಾಗ ನುಡಿವಾಗ ನಿಂತಾಗ ಕುಂತಾಗ ನಿದ್ದೆಯಲ್ಲಿದ್ದಾಗ ಎದ್ದಾಗ (ಎಚ್ಚರಿದ್ದಾಗ) ಮಹಾತ್ಮನು ಅಥವಾ ಮಹಾಮತಿಯು ಎಲ್ಲಕಾಲದಲ್ಲಿ ಶಿವಜ್ಞಾನ ಸಮಾಯೋಗದಿ ದ ಶಿವಪೂಜಾಪರನಾಗಿ ಇರುತ್ತಾನೆ.

ಶಿವಾತ್ಮರಾದ ಶಿವಯೋಗಿಗಳು ಯಾವಾಗಲೂ ಮಾಡಿದ್ದೆಲ್ಲ ಪರಮೇಶನ ಪೂಜೆ. ಶಿವಜ್ಞಾನಿಗಳಿಗೆ ವರ್ಣಾಶ್ರಮ ಸದಾಚಾರಗಳಿಂದ

ಏನೂ ಪ್ರಯೋಜನವಿಲ್ಲ; ಫಲವಿಲ್ಲವಾದರೂ ಲೌಕಿಕ ಸದಾಚಾರವನ್ನು ಭಾವಿಸುತ್ತಾರೆ. ಅಂದರೆ ಶಿವಜ್ಞಾನಿಗಳು ವರ್ಣಾಶ್ರಮ ಧರ್ಮಗಳನ್ನು ಹೀಗಿ ಲೆಂದು ಭಾವಿಸುವುದಿಲ್ಲ; ಆಚರಿಸುವುದಿಲ್ಲ. ಅವರಿಗೆ ಲೌಕಿಕ ಅಂದರೆ ಲೋಕ ಕ್ಕೆ ಬೇಕಾದ 'ಸರ್ವರ ಕಲ್ಯಾಣಕ್ಕೆ ಬೇಕಾದ ಧರ್ಮಾಚಾರ ಹೆಚ್ಚು; ನಡೆಯು ತ್ತಾರೆ. ಇಲ್ಲಿ ಲೋಕ ಪ್ರೇಮ ವೆಗ್ಗಳವಾಗಿದೆ. ವಿಶ್ವಜೀವನವೇ ವಿಶಿಷ್ಟ ವೆನಿಸಿದೆ. ಇದರಿಂದಾಗಿ ರೇಣುಕಗೀತೆ ವಿಶ್ವಗೀತೆಯೆಂದು ನಾವು ಹೇಳುತ್ತಿ ರುವುದು.

"ವಿಶ್ವಂ ಶಿವಮಯಂ ಚೇತಿ ಸದಾ ಭಾವಯತೋ ಧಿಯಾ ।  
ಶಿವೈಕಭಾಜನಾತ್ಮತ್ವಾದೇಕ ಭಾಜನಮುಚ್ಯತೇ॥  
ಸ್ವಸ್ಯ ಸರ್ವಸ್ಯಲೋಕಸ್ಯ ಶಿವಸ್ಯಾದ್ವೈತದರ್ಶನಾತ್।  
ಏಕಭಾಜನಯೋಗೇನ ಪ್ರಸಾದೈಕ್ಯ ಮತಿರ್ಭವೇತ್॥  
ಶಿವೇ ವಿಶ್ವಮಿದಂ ಸರ್ವಂ ಶಿವ: ಸರ್ವತ್ರ ಭಾಸತೇ।  
ಆಧಾರಾಧೇಯಭಾವೇನ ಶಿವಸ್ಯ ಜಗತಃಸ್ಥಿತಿ:॥  
ಚಿತ್‌ಪ್ರಕಾಶಯತೇ ವಿಶ್ವಂ ತದ್ವಿನಾ ವಸ್ತು ನಾಸ್ತಿ ಹಿ ।  
ಚಿದೇಕನಿಷ್ಠಚಿತ್ತಾನಾಂ ಕಿಂ ಮಾಯಾಪರಿಕಲ್ಪಿತೈ:?॥ —ರೇ.ಗೀತೆ

ನಮ್ಮ ಹೇಳಿಕೆಯ ಸತ್ಯತೆಯನ್ನು ಸಪ್ರಮಾಣಿಕತೆಯನ್ನು ರೇಣುಕ ಗೀತೆಯ ಈ ಶ್ರೇಷ್ಠತಮ ಶ್ಲೋಕಚತುಷ್ಟಯದಲ್ಲಿ ಸ್ಪಷ್ಟವಾಗಿ ಮನಗಾಣಬಹುದಾಗಿದೆ. ಇದರಿಂದ ನಾವು ವಿಶ್ವಗೀತೆಯೆಂದು ಶಿವಾಚಾ ರ್ಯರದೆಂಬ ಅಭಿಮಾನದಿಂದ ಹೇಳುತ್ತಿಲ್ಲ; ಆ ಹೆಸರಿಗೆ ವಿಶ್ವವಿಶಾಲ ಭಾವಕ್ಕೆ ಅದು ಅನ್ವರ್ಥಕವಾಗಿದೆಯೆಂದು ಇಂತಹ ವಿಶ್ವ ವಿಶ್ವೇಶ್ವರ ಸಮಭಾವ ಸಹ ಭಾಜನ ಪ್ರಬುದ್ಧವಾಗಿ ಅನನ್ಯಸಾಧಾರಣವಾಗಿ ಶಿವಾದ್ವೈತ ಸಿದ್ಧಾಂತಕ್ಕೆ ಚ್ಯುತಿಯಿಲ್ಲದಂತೆ ವಿಶ್ವದವರೆಲ್ಲರೂ ಮೆಚ್ಚುವಂತೆ ವಿಶ್ವ ವಿಶಿಷ್ಟ ವಿಜ್ಞಾನ ದಿಂದ ಪ್ರತಿಪಾದಿಸಿರುವುದರಿಂದ ವಾಸ್ತವವಾಗಿ ಹೇಳುತ್ತಿದ್ದೇವೆ. ಈ ಹೇಳಿಕೆ ಯನ್ನು ಸಹೃದಯರು ಯಾವ ದೃಷ್ಟಿಯಿಂದಲೂ ಒಪ್ಪದಿರಲಾರರೆಂದು ದೃಢವಾಗಿ ಭಾವಿಸುತ್ತೇವೆ.

ವಿಶ್ವವನ್ನು ಶಿವಮಯವನ್ನಾಗಿ ಸದಾಕಾಲದಲ್ಲಿ ವಿಜ್ಞಾನದಿಂದ ಭಾವಿಸುವ ಮೂಲಕ ವಿಶ್ವಕ್ಕೆ ಶಿವೈಕಭಾಜನತ್ವ ಲಭಿಸುತ್ತದೆ. ಇದರಿಂದಾಗಿ ಶಿವಾದ್ವೈತ ಸಿದ್ಧಾಂತದಲ್ಲಿ ಏಕಭಾಜನಸ್ಥಲವು ನಿರೂಪಿತವಾಗಿದೆ.

ತನಗೂ ಸರ್ವಲೋಕಕ್ಕೂ ಶಿವನಿಗೂ ಅದ್ವೈತದರ್ಶನವುಂಟಾಗಿ ಅಂದರೆ ಅವಿಭಾಜ್ಯ ಸಂಬಂಧವುಂಟಾಗಿ ಏಕಭಾಜನಯೋಗದಿಂದ ಪ್ರಸಾದೈಕ್ಯಮತಿಯೊದಗುತ್ತದೆ. ಅಂದರೆ ಪ್ರಪಂಚದ ವಿಷಯದಲ್ಲಿ ಯಾವ ವಿಕಾರ ಮತಿಯಿಲ್ಲದ ಪ್ರಸನ್ನತೆ ಪ್ರಾಪ್ತಿಸುತ್ತದೆ.

ವಿಶ್ವವಿದೆಲ್ಲ ಶಿವನಲ್ಲಿ ಇರುವುದರಿಂದ ಶಿವನು ವಿಶ್ವದಲ್ಲಿ ಎಲ್ಲೆಲ್ಲಿಯೂ ಬೆಳಗುತ್ತಾನೆ. ಶಿವನಿಗೂ ವಿಶ್ವಕ್ಕೂ ಆಧಾರಾಧೇಯ ಭಾವವಿರುವುದರಿಂದ ಶಿವನಿಗೆ ಜಾಗತಿಕ ಸ್ಥಿತಿಯುಂಟಾಗಿದೆ. ಅಂದರೆ ಜಗದ್ರೂಪವಾಗಿ ಇರುತ್ತಾನೆ. ಜಗತ್ತಿನ ಸ್ಥಿತಿಯೇ ಶಿವನ ಸ್ಥಿತಿಯೆಂದು ಪ್ರತಿಪಾದಿಸುವುದರಿಂದ (ಸಿದ್ಧಾಂತಿಸುವುದರಿಂದ) ಜಗತ್ತಿನ ಸತ್ಯತ್ವವು ಪೂರ್ಣತ್ವವೂ ಸಿದ್ಧವಾಗುತ್ತದೆ. ಜೊತೆಗೆ ಅವಿನಾಭಾವವೂ ಅಳವಡುತ್ತದೆ. ಇದು ಶಿವಾದ್ವೈತ ಸಿದ್ಧಾಂತದ ಮತ್ತು ರೇಣುಕಗೀತೆಯು ವಿಶ್ವ ವಿಶಿಷ್ಟ ವಿಜ್ಞಾನ; ವಿಶ್ವಾನುಭೂತಿ. ಈ ಮಾತಿನ ಪೂರ್ಣಸತ್ಯತೆಯು ಈ ಮುಂದಿನ ಶ್ಲೋಕಾಭಿಪ್ರಾಯದಲ್ಲಿ ಅಸಂಶವಾಗಿ ಅಭಿವ್ಯಕ್ತಿಯಾಗಿದೆ. ಅದುತಿದೆಃ

ಚಿತ್ಕಳೆಯು ಚರಾಚರ ವಿಶ್ವವನ್ನು ಪ್ರಕಾಶಿಸುತ್ತಿದೆ. ಆ ಚಿದ್ವಸ್ತುವನ್ನುಳಿದು ಈ ವಿಶ್ವದ ಯಾವ ವಸ್ತುವೂ ಇಲ್ಲ. ಈ ಚಿದೇಕನಿಷ್ಠ ಚಿತ್ತರಿಗೆ ಮಾಯಾ ಪರಿಕಲ್ಪಿತ ವಸ್ತುಗಳಿಂದೇನೂ ಆಗಬೇಕಾಗಿಲ್ಲ. ಆಗುವುದಿಲ್ಲ. ಏಕೆಂದರೆ ಅವರು ಶಿವೇತರ ವೃತ್ತಿರಹಿತರಾಗಿರುತ್ತಾರೆ. ಶಿವಾತ್ಮರಾಗಿ ನಿರಾಕುಲರಾಗಿರುತ್ತಾರೆ. ಶಿವಾನಂದ ಪರಿಸ್ಫೂರ್ತಿ ರೂಪ ಮುಕ್ತಿವಂತರಾಗಿರುತ್ತಾರೆ. ಭೇದ ವಿಭೇದ ಬಂಧನಕ್ಕೆ ಸಿಕ್ಕರು; ಬವಣೆಗೀಡಾಗರು. ಸರ್ವವನ್ನು ಸ್ವಸ್ವರೂಪವಾಗಿ ಕಾಣುತ್ತಾರೆ.

"ಶಿವಂ ವಿಶ್ವಂ ಗುರುಂ ಸಾಕ್ಷಾದ್ಯೋಜಯೇನ್ನಿತ್ಯಮಾತ್ಮನಾ।
ಏಕತ್ವೇನ ಚಿದಾಕಾರೇ ತದಿದಂ ಸಹಭಾಜನಂ॥
ಅಯಂ ಶಿವೋ ಗುರುಶ್ಚೇಷ ಜಗದೇತಚ್ಚರಾಚರಂ ।
ಅಹಂ ಚೇತಿ ಮತಿರ್ಯಸ್ಯ ನಾಸ್ತ್ಯಸೌ ವಿಶ್ವಭಾಜಕಃ॥
ಗುರೋಃ ಶಿವಸ್ಯ ಶಿಷ್ಯಸ್ಯ ಸ್ವಸ್ವರೂಪತಯಾ ಸ್ಮೃತಿಃ।
ಸಹ ಭಾಜನಮಾಖ್ಯಾತಂ ಸರ್ವಗ್ರಾಸಾತ್ಮಭಾವತಃ॥" — ರೇ. ಗೀತೆ

ಸರ್ವೋದ್ಧಾರ ಸಮರ್ಥನಾದ ಗುರುವನ್ನು–ವಿಶ್ವವನ್ನು–ಶಿವನನ್ನು ತನ್ನ ಚಿದಾಕಾರವಾದ ಆತ್ಮನಲ್ಲಿ ನಿತ್ಯ ಏಕತ್ವದಿಂದ ಸಾಕ್ಷಾತ್ತಾಗಿ ಯೋಜಿಸಿ ಅನುಸಂಧಾನಿಸುವಿಕೆಯೆ ಸಹಭಾಜನವೆನಿಸುತ್ತದೆ. ಅವನು ಶಿವನು, ಇವನು ಗುರುವು, ಇದು ಚರಾಚರ ಜಗತ್ತು ಮತ್ತು ನಾನು ಎಂಬ ಮತಿಯು ಯಾವಾತನಿಗಿಲ್ಲವೋ ಆತನು ವಿಶ್ವಭಾಜಕನು. ಗುರು–ಶಿವ ಶಿಷ್ಯರ ಸರ್ವ ಗ್ರಾಸಾತ್ಮಭಾವದಿಂದ ಸ್ವಸ್ವರೂಪತ್ವ ಸ್ಮೃತಿಯು ಸಹಭಾಜನವೆಂದು ನಿರೂಪಿತವಾಗಿದೆ.

ಸಾಮಾನ್ಯರ ನೇತ್ರಕ್ಕೆ ಗೋಚರಿಸುವುದು ಸ್ಥೂಲ ಮತ್ತು ದೃಶ್ಯ ವಿಷಯ ಮಾತ್ರ. ಅಸಾಮಾನ್ಯರ ಸ್ಮೃತಿಗೆ ಅಥವಾ ಮತಿಗೆ ಗೋಚರಿಸುವುದು ದೃಶ್ಯಾದೃಶ್ಯ ಸೂಕ್ಷ್ಮ ವಿಷಯ! ಅಸಾಮಾನ್ಯರು ಬಾಹ್ಯಾಭ್ಯಂತರ ಭಾವಿಗಳಾಗಿರುತ್ತಾರೆ. ಅನೇಕದರಲ್ಲಿ ಏಕತ್ವ ಭಾವಿಗಳಾಗಿರುತ್ತಾರೆ. ಅವಿದ್ಯಾ ಅಸ್ಮಿತಾದಿಗಳಿಂದ ವಿರಹಿತರಾಗಿರುತ್ತಾರೆ. ಸರ್ವವನ್ನು ಗ್ರಾಸಾತ್ಮಭಾವಿಗಳಾಗಿರುತ್ತಾರೆ. ಸ್ವಸ್ವರೂಪತ್ವ ಸ್ಮೃತಿಯುಳ್ಳವರಾಗಿರುತ್ತಾರೆ. ಇದರಿಂದ ಅವರು ಸರ್ವಸಮರಸಭಾವಿಗಳಾಗಿರುತ್ತಾರೆ. ಸರ್ವಾತ್ಮತ್ವದ ಉದಾತ್ತ ಭಾವಾನುಭೂತಿಗೇರಿರುತ್ತಾರೆ. ಸರ್ವದರಲ್ಲಿ ಚಿಚ್ಚೇತನ ದರ್ಶನ ಶಕ್ತಿಯುಳ್ಳವರಾಗಿರುತ್ತಾರೆ. ಇದರಿಂದಾಗಿ ಸರ್ವಪ್ರತೀಕರಾದ ಗುರು–ಶಿವ–ವಿಶ್ವ ತತ್ತ್ವಗಳನ್ನು ತನ್ನಾತ್ಮದಲ್ಲಿ ಸಮನ್ವಯಿಸಿ ಸಚ್ಚಿತ್‌ಸ್ವರೂಪದಲ್ಲಿ ಏಕತ್ವದಲ್ಲಿ ಕಂಡು ಸಹಭಾಜನತೆಯನ್ನು ಸಂಪಾದಿಸುತ್ತಾರೆ. ಇದು ಐಕ್ಯಸ್ಥಲದ ಚರಮ ಸ್ಥಿತಿ; ಪರಮಗತಿ. ಇದುಂಟಾಗುವುದು ಗುರುದೇವನ ಕಾರುಣ್ಯರೂಪ ಸ್ಫೂರ್ತಿ

ಪ್ರತಿಭೆಯಿಂದ ಅಂತರಂಗದ ಅಮೂಲ್ಯ ಚಿತ್ಕಳಾಮೂರ್ತಿಯು ಸಾಕ್ಷಾತ್ಕಾರವಾಗಿ ಅದನ್ನು ಕರುಣಿಸಿದ ಗುರು-ಶಿವ-ವಿಶ್ವ ತತ್ವಗಳನ್ನು ಏಕೋ ಭಾವದಲ್ಲಿ ಅಳ ವಡಿಸಿಕೊಳ್ಳುವ ಸಹಭಾಜನತೆ ಗಮನಿಸುತ್ತದೆ. ಈ ಜಡ-ಜಂಗಮ ಸಂಗಮ ದಲ್ಲಿ ಸರ್ವಗ್ರಾಸಾತ್ಮಭಾವವಿರುತ್ತದೆ. ಅಂದರೆ ಏನೆಲ್ಲವನ್ನೂ ಒಳಕೊಳ್ಳುವ ದೃಕ್ಕ್ರಿಯಾಶಕ್ತಿ ಸಂಭವಿಸುತ್ತದೆ. ಸಮ-ರಸಾನುಭವಾನಂದವುಂಟಾಗುತ್ತದೆ. ಸತ್ಯ ಸಂಪೂರ್ಣವಾಗಿ ಸ್ವಾತ್ಮಗತವಾಗುತ್ತದೆ. ಲೋಕೋತ್ತರ ಚಿನ್ಮಯತ ಚಿತ್ತನಿಷ್ಠವಾಗುತ್ತದೆ.

ಇಂತಾಗುವಲ್ಲಿ ಗುರುವಿನ ಪಾತ್ರ ಗಣ್ಯ. ಶಿವಮಯ ವಿಶ್ವವನ್ನೇ ಆತ್ಮ ನಲ್ಲಿ ಅಳವಡಿಸಿಕೊಳ್ಳುವ ಈ ಭೌತ ವಿಜ್ಞಾನಾತೀತ ಸಾಮರ್ಥ್ಯವನ್ನು ಶರ ಣಾಗತರಿಗೆ ಅನುಗ್ರಹಿಸುತ್ತಾನೆ. ಶಿವಾದ್ವೈತ ಸಿದ್ಧಾಂತದ ದಿಗಂತ ನಿಲವಿನ ನೆಲೆಯಲ್ಲಿ ನಿಲ್ಲಿಸುತ್ತಾನೆ. ಎಲ್ಲೆಲ್ಲಿಯೂ ಎಲ್ಲರಿಗೂ ಎಲ್ಲ ಕಾಲದಲ್ಲಿ ಸಲ್ಲುವಂತೆ ಸಗುತ್ತಾನೆ. ಶ್ರೀ ಗುರುದೇವನ ಆ ಪ್ರಾತಿಭ ಚಕ್ಷು ವಿಶ್ವ ವಿಶಿಷ್ಟ ರೀತಿ ಯದು. ಅತಿ ಶ್ರೇಷ್ಠವಾದುದು. ಆ ಚಿನ್ಮಯಾತ್ಮಕ ದಿವ್ಯರಸ ಸ್ವರೂಪ ವಾದುದು. ಮತ್ತು ಆ ದಿವ್ಯ ಕಳಾತ್ಮಕವಾದುದು. ಅಂದರೆ ಆ ಪರಂಜ್ಯೋತಿ ರೂಪಾದುದು. ಆ ಜ್ಯೋತಿಯಲ್ಲಿ ದಿವ್ಯ ನಾದವಿದೆಯೆಂದು ಬೇರೆ ಹೇಳಬೇ ಕಾದುದಿಲ್ಲ. ಆ ಪರಂಜ್ಯೋತಿಯನ್ನು ಶರಣಾಗತ ಶಿಷ್ಯರ ಅಂತರಂಗದ ಆತ್ಮಜ್ಯೋತಿಯನ್ನಾಗಿಸಿ ತನ್ನ ಅಂತೇವಾಸಿಯನ್ನು „ವಿಶ್ವಹೋಮಿ" ಯ ನ್ನಾಗಿಸುತ್ತಾನೆಂದು ನಿರೂಪಿಸಿ ತನ್ನ ರೇಣುಕ ಗೀತೆಯನ್ನು ವಿಶಿಷ್ಟ ವಿಶ್ವ ಗೀತೆಯನ್ನಾಗಿಸಿದ್ದಾನೆ. ಶಿವಾನುಭೂತಿಯಲ್ಲಿ ಪರಾಕಾಶಕ್ಕೇರಿದ ಶ್ರೀ ಶಿವ ಯೋಗಿ ಶಿವಾಚಾರ್ಯವರ್ಯನು.

ವಿಶ್ವಹೋಮಿ :-

" ಪರಾಹಂತಾಮಯೇ ಸ್ವಾತ್ಮಪಾವಕೇ ವಿಶ್ವಭಾಸಕೇ ।
ಇದಂತಾಹವ್ಯಹೋಮೇನ ವಿಶ್ವಹೋಮೀತಿ ಕಥ್ಯತೇ ॥
ಅಹಂ ಶಿವೋ ಗುರುಃಶ್ಚಾಹಮಹಂ ವಿಶ್ವಂ ಚರಾಚರಂ ।
ಯಯಾ ವಿಜ್ಞಾಯತೆ ಸಮ್ಯಕ್ ಪೂರ್ಣಾಹಂತೇತಿ ಸಾಸ್ಮೃತಾ ॥

ಆಧಾರವಹ್ನೌ ಚಿದ್ರೂಪೇ ಭೇದಜಾತಂ ಜಗದ್ಧವಿ: ।
ಜುಹೋತಿ ಜ್ಞಾನ ಜುಹ್ವಾಯ : ಸಜ್ಞೇಯೋ ವಿಶ್ವಹವ್ಯಬುಕ್ ॥"

ರೇ. ಗೀತೆ

ವಿಶ್ವಪ್ರೇಮಿಯನ್ನು ವಿಶ್ವಹೋಮಿಯೆಂದು ಪರಿಕಲ್ಪಿಸಿ ಉಪಮಿಸಿ ರೂಪಿಸಿ ಹೋಮಕ್ಕೆ ಹೋಲಿಸಿ ಕಾವ್ಯ ಪ್ರತಿಭೆಯಲ್ಲಿ ವಿಶಿಷ್ಟ ರೀತಿಯಲ್ಲಿ ವಿಶ್ಲೇಷಿಸಲಾಗಿದೆ. ಪರಾಹಂತೆಯೆ ಪೂರ್ಣಾಹಂತೆಯೆಂದು ಪರಿಲಕ್ಷಿಸಲಾಗಿದೆ. ಕವಿ ಆತ್ಮತೇಜದಲ್ಲಿ ವಿಶ್ವ ಹೋಮಿಯಾಗಿದ್ದಾನೆ. ಆ ಆತ್ಮತೇಜ (ಪಾವಕ) ವಿಶ್ವವನ್ನು ಬೆಳಗುವ ಪರಾಹಂತಾಮಯವಾಗಿದೆ. ವಿಶ್ವಹೋಮಕ್ಕೆ ಇದಂತೆಯೆ ಹವ್ಯವಾಗಿದೆ. ಪರಾಹಂತಾರನೆ ವಿಶ್ವಹೋಮಿಯಾಗಿದ್ದಾನೆ. ಆತ್ಮಪ್ರಕಾಶವೇ ಯಜ್ಞಾಗ್ನಿಯಾಗಿದೆ. ತಾನು, ತಾನು ಆರಾಧಿಸುವ ಪರಶಿವನು, ಆರಾಧಿಸಹಚ್ಚಿದ ಗುರು ಮಹಾದೇವನು ಚರಾಚರ ವಿಶ್ವವು ಎಲ್ಲವೂ ಅಹಂ ಪದವಿಷಯವಾಗಿದೆ.ಅಹಂ ಎಂದರೆ ಕೇವಲ ನಾನಲ್ಲ;ಶಿವ ಗುರು ವಿಶ್ವ ಇವೆಲ್ಲವೂ ಅಹಂ ( ನಾನು ) ಎಂದು ಚನ್ನಾಗಿ ಚಿತ್ತೈಸುತ್ತಾನೆಯೋ ಅದುವೆ ಪೂರ್ಣಾಹಂತೆ ! ಆಧಾರಗತ ಚಿದ್ರೂಪವಹ್ನಿಯಲ್ಲಿ ವಿವಿಧ ಭೇದಗಳಿಂದೊಡಗೂಡಿದ ಈ ಜಗತ್ತೆಂಬ ಹವಿಯನ್ನು ಹವನಮಾಡುತ್ತಾನೆಯೋ ಅವನು ಜ್ಞಾನ ಯಾಜ್ಞಿಕ; ಅವನೇ ವಿಶ್ವವೆಂಬ ಹವಿಸ್ಸನ್ನು (ಹವ್ಯವನ್ನು) ಆರೋಗಿಸುವ ಯಜ್ಞಾಗ್ನಿಯು. ಎಂದು ವಿಶ್ವಮಯವಾದ ಭಾವಗೀತೆಯನ್ನು ಗೇಯ ಮಾಡಲಾಗಿದೆ.; ವಿಶ್ವಗಾನ ಮಾಡಲಾಗಿದೆ.

ವಿಶ್ವಕ್ರಿಯೆ, ವಿಶ್ವಜ್ಞಾನ, ವಿಶ್ವಭಾವ ವಿಶ್ವಾನುಭಾವ, ವಿಶ್ವಾನಂದ ವಿಶ್ವೈಕ್ಯ. ಇದು ರೇಣುಕ ಗೀತೆಯ ವಿಶ್ವ ಮನೋಭಾವ " ತರಂಗಾದಿರ್ಯಥಾ ಸಿಂಧೋ; ಸ್ವರೂಪಾನ್ನಾತಿರಿಚ್ಯತೇ । ತಥಾ ಶಿವಾತ್‌ವಿಶ್ವಮೇತನ್ನ ಭಿದ್ಯತೇ ॥ " ಇದು ರೇಣುಕ ಗೀತೆಯ ವಿಶ್ವಗೀತೆ, ವಿಶ್ವಗಾನ.

ಪ್ರಪಂಚವೇ ಪರಾಕಾಶ; ಪರಾಕಾಶವೇ ಪ್ರಪಂಚ. ಉಭಯಕ್ಕೆ ಭೇದ ವಿಲ್ಲ; ಉಭಯವೂ ಅವಿಭಾಜ್ಯಗಳು.

"ಯಥಾ ಜ್ಯೋತೀಂಷಿ ಭಾಸಂತೇ ಭೂತಾಕಾಶೇ ಪೃಥಕ್ ಪೃಥಕ್।
ತಥಾಭಾಂತಿ ಪರಾಕಾಶೇ ಬ್ರಹ್ಮಾಂಡಾನಿ ವಿಶೇಷತ:॥
ನಿರಸ್ತೋಪಾಧಿ ಸಂಬಂಧಂ ನಿರ್ಮಲಂ ಸಂವಿದಾತ್ಮಕಂ।
ಪರಾಕಾಶಂ ಜಗಚ್ಚಿತ್ರ ವಿಲಾಸಾಲಂಬ ಭಿತ್ತಿಕಂ॥"

ಪರಮಾಕಾಶಮವ್ಯಕ್ತಂ ಪ್ರಬೋಧಾನಂದ ಲಕ್ಷಣಂ ।
ಲಿಂಗಂ ಜ್ಯೋತಿರ್ಮಯಂ ಪ್ರಾಹುರ್ಲೀಯಂತೇ ಯತ್ರಯೋಗಿನ : ॥
ಸಂವಿದೇವ ಪರಾಕಾಷ್ಠಾ ಪರಮಾನಂದರೂಪಿಣೀ ।
ತಾಮಾಹು : ಪರಮಾಕಾಶಂ ಮುನಯೋ ಮುಕ್ತಸಂಶಯಾಃ॥"

ರೇಣುಕಗೀತೆಯು ಪರಮಾಕಾಶ ಪ್ರಪಂಚಗಳೆರಡರ ಪರಮ ಪ್ರಜ್ಞೆಯಿದು. ಪರಮಾಕಾಶ ಪರಮ ಲಕ್ಷಣವಿದು. ಇದಕ್ಕಿಂತ ಉನ್ನತ ಮನೋಭಾವ ವಿಶ್ವದ ಬಗೆಗೆ ಬೇರೆ ಎಲ್ಲಿಯೂ ಕಾಣಲಾಗುವುದಿಲ್ಲ.



|| ಓಂ; ಶಂ; ||

ವೀರಶೈವಧರ್ಮದ ಏಕೈಕ ಸಿದ್ಧಾಂತ ದಿಗಂತ ಮಹೇಶ ಗ್ರಂಥ ಸಿದ್ಧಾಂತ ಶಿಖಾಮಣಿ ಶ್ರೀ ಷಟ್‌ಸ್ಥಲೋದ್ಯನ್ಮಣಿ, ಶ್ರೀ ಗೋಪ್ಯ ಚಿಂತಾಮಣಿಯ ಚಿಂತನದಿಂದ ಚಿಮ್ಮಿ ಹೊಮ್ಮಿ ಬಂದ ಬಯಕೆಯ ಈ ಮೂವತ್ತು

# ಹೊನ್ನ ಹೊತ್ತಗೆಗಳು–ಹೊಸತು ಹೊಳಕುಗಳು !

## ಡಾ|| ಶ್ರೀ ಜ. ಚ. ನಿ. ಚನ್ನಸನ್ನಿಧಿಯವರು ಬರೆದ ೩೦ ಕಲಾಕೃತಿಗಳು

೧) ಮಣಿಕಾಂತಿ
೨) ಮಣಿಮುಕುರಂ
೩) ಮಣಿವಚನಗಳು
೪) ಜೀವನಸಿದ್ಧಾಂತ-ಭಕ್ತಿಸಂಪುಟ
೫) " ಮಹೇಶ "
೬) " ಪ್ರಸಾದಿ "
೭) " ಪ್ರಾಣಲಿಂಗಿ "
೮) " ಶರಣ "
೯) " ಐಕ್ಯ "
೧೦) ಸೌಂದರ್ಯದರ್ಶನ
೧೧) ಶೀಲಸೌಂದರ್ಯ
೧೨) ಶಿವಶಕ್ತಿ ಸಂವೇದನ
೧೩) ಜೀವನ್ಮುಕ್ತಿ
೧೪) ಮಹಿಳಾಮೌಲ್ಯ
೧೫) ಸಮದರ್ಶನ–ಸಮವರ್ತನ
೧೬) ಶಿವಯಜ್ಞ
೧೭) ಕಾಯಕವೆ ಕಳಾಚೈತನ್ಯ
೧೮) ಅನ್ವೇಷಣ–ಅನುಸಂಧಾನ
೧೯) ದೀನದಲಿತೋದ್ಧಾರ
೨೦) ವಿಶ್ವಗುರು
೨೧) ರೇಣುಕಗೀತೆಯ ರಸಸಮೀಕ್ಷೆ
೨೨) ರೇಣುಕ ಗೀತೆಯ ರಸದರ್ಶನ
೨೩) ಬಾಳ್ಬೆಳಗು
೨೪) ಅಖಂಡಯೋಗ
೨೫) ರೇಣುಕಗೀತೆಯ ಕೈಪಿಡಿ
೨೬) ಚಿದ್ವಿಭೂತಿಯೋಗ
೨೭) ರೇಣುಕಗೀತೆಯ ಕಾವ್ಯಶಾಸ್ತ್ರ ಮೀಮಾಂಸೆ,
೨೮) ತತ್ತ್ವಾಚಾರ ತುಂಗೋತ್ರಿ
೨೯) ಶಿವಾನುಭವಯೋಗ ಸೌರಭ
೩೦) ಶ್ರೀ ಗೋಪ್ಯ ಚಿಂತಾಮಣಿ

# ಸಂಶೋಧನಾತ್ಮಕ ಶಿವಾಗಮ ಗ್ರಂಥಗಳು

೧) ಲಿಂಗವಂತ ಪಾಶುಪತಧರ್ಮ (ಚಂದ್ರಜ್ಞಾನಾಗಮ ಕುರಿತು)
೨) ಮಹಾ ಪಾಶುಪತವಿಧಾನ ಅರ್ಥಾತ್ ವೀರಶೈವ ವಿಧಾನ (ಕಾರಣಾಗಮ)
೩) ಪಾರಮೇಶ್ವರ ಪ್ರಭೆ (ಭಾಗ–೧–೨) (ಕನ್ನಡಾನುವಾದ)
೪) ಸೂಕ್ಷ್ಮತಂತ್ರಸಾರ " "
೫) ಶಿವಾಗಮ ಸಾಹಿತ್ಯ (ಚಿಂತನ ಪರ)
೬) ಜಗದ್ಗುರು ಆದಿ ರೇಣುಕರು (ಸಂಶೋಧಿತ)
೭) ಚಿಗುಟ್ಟ ಚಿಂತನ (ಸಂಶೋಧಿತ)
೮) ಶಿವಾಗಮ ಸೌರಭ
೯) ಶಿವಾಗಮಂಗಳಲ್ಲಿ ವೀರಶೈವ ಧರ್ಮ ಸಿದ್ಧಾಂತ !
೧೦) ಮಹೇಶ್ವರ ವೀರಮಾಹೇಶ್ವರ
೧೧) ಸಂಶೋಧನ
೧೨) ಶಿವಾಚಾರಸ್ಥರ ಸೂಳ್ನುಡಿಗಳು

**ಡಾ॥ ಶ್ರೀ ಜ. ಚ. ನಿ. ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ**

**ಶ್ರೀ ಶಿವಾಚಾರ್ಯ ತತ್ತ್ವ ತುಂಗೋತ್ರಿ,**

**ಚೈತನ್ಯಪಥ! ನಿಜಾನುಭಾವ ನಿವಾಸ, ಬೆಂಗಳೂರು.**

ಶಿವಕವಿ, ಶಿವಾನುಭವಿ ಶಿವಾದ್ವೈತ ಸಿದ್ಧಾಂತ ನಿರೂಪಕ

## ಶಿವಯೋಗಿ ಶಿವಾಚಾರ್ಯರ ಸೂಕ್ತಿ ಸುಧಾಧಾರೆಗಳು

# ಶರಚ್ಚಂದ್ರ ಮರೀಚಿಕೆಗಳು

೧) ಭಿತ್ತಿ ಚಿತ್ರದಂತೆ, ಮಣ್ಣು ಮಡಿಕೆಯಂತೆ, ನೀರು ನೀರ್ತೆರೆಯಂತೆ, ತಂತುಪಟದಂತೆ, ಬಿತ್ತು ಮೊಳಕೆಯಂತೆ ಗುಣ ಗುಣಿಯಂತೆ, ಶಿವಶಕ್ತಿಯಂತೆ, ಬ್ರಹ್ಮಬ್ರಹ್ಮಾಂಡ ಸಂಬಂಧ; ಚರಾಚರ ಸಂಬಂಧ ಅದು ಸಮವಾಯ ಸಂಬಂಧ, ಅಂತೆಯೆ ಅಂಗಲಿಂಗ ಸಂಬಂಧ !

೨) ಚರ ನಿತ್ಯ–ಅಚರ ನಿತ್ಯ; ಪರಪೂರ್ಣ–ಅಪರ ಪೂರ್ಣ; ಚರಾಚರ ಸತ್ಯ; ಪರಾಪರ ಸತ್ಯ. ಉಭಯ ಸಚ್ಚಿನ್ಮಯ; ಶಿವಮಯ.

೩) ಆತ್ಮ–ಅಂತರಾತ್ಮ–ಪರಮಾತ್ಮ ಇವು ಪರಿವಿಡಿದು ಕಾಯಯೋಗ–ಅಕಾಯಯೋಗ–ಪರಕಾಯ ಯೋಗಗಳೊಡನೆ ಅನ್ಯೋನ್ಯವಾಗಿ ಆಧಾರಾಧೇಯ ಭಾವವುಳ್ಳವುಗಳು.

೪) ಶಿವೋಪಾಸನ ನಿರತ ಕಾಯವೇ ಕಾಯ; ಶಿವನಾಮನಿರತ ವಾಣಿಯೆ ವಾಣಿ; ಶಿವಧ್ಯಾನ ನಿರತ ಮನವೇ ಮನ. ಇಂತು ಕಾಯ ವಾಙ್ಮನಗಳೆಂಬ ತ್ರಿಕರಗಳಲ್ಲಿ ಪರಿವಿಡಿದು–ಉಪಾಸನ ಪ್ರಾರ್ಥನ ಚಿಂತನ ನಿ[illegible] ತತ್ವವೇ ಮಾನವತ್ವ !

೫) ಪರಶಿವನು ವಿಶ್ವಾತ್ಮನಾದರೂ ಭಕ್ತರ ಭಾವದಲ್ಲಿ ವಿಶೇಷವಾಗಿ ವಿರಾಜಿಸುತ್ತಾನೆ. ನಿತ್ಯ ಸತ್ಯಶುದ್ಧ ಕ್ರಿಯಾಶೀಲರಾಗಿ ಸಂತೋಷಚಿತ್ತರಾಗಿ ಬಾಳುವವರ ಹೃದಯಾರವಿಂದಭೃಂಗನಾಗಿ ಶಿವನಿರುತ್ತಾನೆ.

೬) ಕಾಯಕವ್ರ[illegible] ಶಿವಾಚಾರಸ್ಥ, ಅರಿದಾಚರಿಸದವನೆ ಭವಕೂಪಸ್ಥ !



# ಚಿಂತಾಮಣಿ

ಬೇಡಿದುದನ್ನು ಕೊಡುವ ಚಿಂತಾಮಣಿ ಯಾರಿಗೆ ಬೇಡ ? ಎಲ್ಲರಿಗೂ ಬೇಕು ದಿಟ ! ಆದರೆ ಅದು ಎಲ್ಲರಿಗೂ ಸಿಕ್ಕುವುದಿಲ್ಲ. ಎಂಬ ಮಾತನ್ನು ದಿಟಪುಟ ಗೊಳಿಸಲೋ ಏನೋ ಹನ್ನೆರಡು ನೂರು ವರುಷಗಳ ಬಳಿಕ ತನ್ನ ಗೋಪ್ಯತೆಯಿಂದ ಇದೀಗ ಹೊರಬರುತ್ತಿದೆ. ಬಂದಿದೆ.

ವೀರಶೈವ ಧರ್ಮಕ್ಕೆ ಸ್ವಯ ಪ್ರಮಾಣಗಳಾದ ಮತ್ತು ವಚನ ವಾಙ್ಮಯಕ್ಕೆ ಆಕರಗಳಾದ ಸರ್ವ ಶಿವರುದ್ರಾಗಮಗಳೆಂಬ ಮಹಾ ಮೇರುಗಿರಿಯನ್ನು ಪರಿಶೋಧಿಸಿ ಪರಾಮರ್ಶಿಸಿ ಪ್ರಕಾಶಗೊಂಡಿದೆ. 'ಸಿದ್ಧಾಂತ ಶಿಖಾಮಣಿ'! ಶ್ರೀ ಗೋಪ್ಯ ಚಿಂತಾಮಣಿ !! ಇವರ ಬಗೆಗೆ ಕಿಂಚಿತ್ ಚಿಂತನ ಈ ಕಿರುಕೃತಿ !